# ಸಪ್ಲೈ ಏಜೆನ್ಸಿ ಲಿಮಿಟೆಡ್ ಉಡುಪಿ.

## ಮಾಲಕರು:-

ಮಣಿಪಾಳ ಪವರ್ ಪ್ರೆಸ್, ಶ್ರೀ ಭಾರತವಸ್ತುಮಂದಿರ, ಅಂತರಂಗ.
ತುಳುನಾಡ್ ಸ್ಟೇಶನರಿ ಮಾರ್ಟ್, ತುಳುನಾಡ್ ಪ್ರೆಸ್ ಇತ್ಯಾದಿ.

ಹೆಡ್ ಆಫೀಸು:
ಶಾಬ್ಬರ್ಯರ್ ಜಂಕ್ಷನ್,
ಉಡುಪಿ.

ಅಧಿಕೃತ ಮೂಲಧನ ರೂ. ೧,೦೦,೦೦೦
ಚಂದಾತೆತ್ತ ,, ,, ೩೦,೩೦೦

ಫೈನಾನ್ಸ್ ಡಿಪಾರ್ಟ್‌ಮೆಂಟ್:
ವ್ಯಾಸಭವನಂ,
ಉಡುಪಿ.

ನಿರಖು ಠೇವಣಾತಿಗಳು ಈ ಕೆಳಗಣ ಬಡ್ಡಿಯಲ್ಲಿ ಸ್ವೀಕರಿಸಲ್ಪಡುತ್ತವೆ.

| | | | | | | | |
|---|---|---|---|---|---|---|---|
| ೩ | ತಿಂಗಳಿಂದ | ೬ | ತಿಂಗಳ | ವರೆಗೆ | ಶೇಕಡ | ೪ | ಸಲೆಯಲ್ಲಿ |
| ೬ | ,, | ೧೧ | ,, | ,, | ,, | ೫ | ,, |
| ೧೨ | ,, | ೧೮ | ,, | ,, | ,, | ೬ | ,, |

೨ ವರ್ಷ ಯಾ ಅದಕ್ಕಿಂತ ಹೆಚ್ಚಿನ ಸಮಯಕ್ಕಿಡುವ ಬಡ್ಡಿ ದರವನ್ನು ಬರೆದು ತಿಳಿದುಕೊಳ್ಳಿರಿ.

## ✻ ನಮ್ಮ ಇತರ ವಿಶೇಷ ತರದ ಡಿಪಾಜಿಟುಗಳು. ✻

೧. ದೀನಬಂಧು ನಿಧಿ.
೨. ಇಂಡಸ್ಟ್ರಿಯಲ್ ಕ್ಯಾಶ್ ಸರ್ಟಿಫಿಕೇಟ್.
೩. ಇಂಡಸ್ಟ್ರಿಯಲ್ ಡಿಪಾಜಿಟ್.
೪. ಸೇವ್ ಏಸ್ ಯು ಪ್ಲೀಸ್.

ಹೆಚ್ಚಿನ ಮಾಹಿತಿಗಳಿಗೆ ಬರೆದು ತಿಳಿದುಕೊಳ್ಳಿರಿ.

ಮೆನೇಜರ್
ಅಸಿಸ್ಟೆಂಟ್,



# ಅಂತರಂಗ




ವಿಶೇಷ ತರದ ಕನ್ನಡ ವಾರಪತ್ರಿಕೆ.

ಮನಿಪಳ, ಉಡುಪಿ.

ಸಂಪುಟ ೧.

೧೭ ಜುಲಾಯಿ '೩೮.
ಆದಿತ್ಯವಾರ.

ಸಂಚಿಕೆ ೧.



ಎಸ್. ಯು. ಪಣಿಯಾಡಿ.
*(Editor in Chief)*

ಕೆ. ಹೈದರ್.
*(Managing Editor)*



ವಾರ್ಷಿಕ ಚಂದಾ
ಮೂರು ರೂಪಾಯಿ.

ವಿ. ಪಿ. ಕ್ರಮವಿಲ್ಲ.
ಹಣವನ್ನು ಮುಂಗಡವಾಗಿ
ಕಳುಹಬೇಕು.



Associate Editors.

ಎಸ್. ಎಸ್. ಕಾರಂತ.
ಪಿ. ವಿ. ಆಚಾರ್ಯ.
ಪಿ. ಎಲ್. ಅಡಿಗ.
ಎಂ. ವಿ. ಹೆಗ್ಡೆ.



ಬಿಡಿಸಂಚಿಕೆ
ಒಂದಾಣೆ.

ನಿಮ್ಮ ಊರಿನ
ಏಜಂಟರಿಂದ
ಪಡಕೊಳ್ಳಿರಿ.





ಮಾಲಕರು ಮುದ್ರಕರು ವ ಪ್ರಕಾಶಕರು:

**ಸಪ್ಲೈ ಏಜೆನ್ಸಿ ಲಿಮಿಟೆಡ್ ಉಡುಪಿ.**

ANNUAL
SUBSCRIPTION
RS. 3—0—0.

ಮುದ್ರಣ ವ ಪ್ರಕಟನ ಸ್ಥಳ:
ಮಣಿಪಳ ಪವರ್ ಪ್ರೆಸ್,
ಮಣಿಪಳ, ಉಡುಪಿ.

SINGLE COPY
AS. 0—1—0

## ಬರೆಹಗಾರರಿಗೆ ಸಲಹೆ

೧. ಲೇಖನಗಳನ್ನೂ, ಕಿರುಗತೆಗಳನ್ನೂ, ಒಂದಂಕ ನಾಟಕಗಳನ್ನೂ ಯಾರೂ ಬರೆದು ಕಳುಹಿಸಬಹುದು.

೨. ಬರಹವು ಕಾಗದದ ಒಂದೇ ಮೈಯಲ್ಲಿ ಸ್ಪಷ್ಟವಾಗಿರಬೇಕು.

೩. ಯೋಗ್ಯ ಕಂಡವುಗಳನ್ನು ಮಾತ್ರ ಪ್ರಕಟಿಸಲಾದೀತು.

೪. ಪ್ರಕಟಿಸದಿದ್ದ ಲೇಖನಗಳನ್ನು ಬರೆಹಗಾರರ ಖರ್ಚಿನಿಂದಲೇ ವಾಪಾಸು ಕಳುಹಿಸಬಹುದು.

೫. ಪ್ರತಿಫಲವನ್ನು ಅಪೇಕ್ಷಿಸುವ ಲೇಖಕರು ಮುಂಚಿತವಾಗಿಯೇ ಪ್ರತಿಫಲದ ವ್ಯವಸ್ಥೆಯನ್ನು ನಮ್ಮ ಕೂಡೆ ಮಾಡಿಕೊಳ್ಳಬೇಕು.

೬. ಸಾಧಾರಣ ವರ್ತಮಾನಗಳನ್ನು ಯಾರೂ ನಮಗೆ ಕಳುಹಿಸಬೇಕಾದ ಅಗತ್ಯವಿಲ್ಲ. ನಾವವನ್ನು ಪ್ರಕಟಿಸುವುದಿಲ್ಲ.

ಸಂಪಾದಕ,

**ಅಂತರಂಗ,** ಉಡುಪಿ.

## ಪ್ರಕಟನೆ ಕೊಡುವವರಿಗೆ ಸಲಹೆ

೧. ಪ್ರಕಟನೆಯ ವಿಷಯಗಳು ಅಯೋಗ್ಯವಾಗಿ ಕಂಡುಬಂದಲ್ಲಿ ಮುದ್ರಿಸಲಾಗುವುದಿಲ್ಲ.

೨. ಒಂದೇ ಬದಿಯಲ್ಲಿ ವಿವರವಾಗಿ ಬರೆಯಬೇಕು.

೩. ಬದಲಾವಣೆಯಿದ್ದಲ್ಲಿ ಒಂದು ವಾರ ಮುಂಚಿತವಾಗಿ ತಿಳಿಸಬೇಕು.

೪. ಬ್ಲೋಕುಗಳು ವಾಪಾಸು ಬೇಕಾಗಿದ್ದಲ್ಲಿ ಅವರವರ ಖರ್ಚಿನಿಂದಲೇ ವಾಪಾಸು ಪಡೆಯಬೇಕು.

೫. ಪ್ರಕಟನೆ ಬಾಬ್ತು ಹಣವನ್ನು ಮುಂಗಡವಾಗಿಯೇ ಕೊಡಬೇಕು.

## ಪ್ರಕಟನೆಯ ದರ

| | | | | |
|---|---|---|---|---|
| ಇಡೀ | ಪುಟ | ರೂಪಾಯಿ | ೧೦—೦—೦ | ಒಂದು ಸರ್ತಿಗೆ |
| ಅರ್ಧ | ,, | ,, | ೫—೦—೦ | ,, |
| ಕಾಲು | ,, | ,, | ೩—೦—೦ | ,, |
| ಅರೆಕಾಲು | ,, | ,, | ೨—೦—೦ | ,, |
| ಕಲಮು ಇಂಚಿಗೆ | | ,, | ೧—೦—೦ | ,, |

**ವಿಶೇಷತರದ ಪ್ರಕಟನೆಗೂ, ವಾರ್ಷಿಕ ದರಕ್ಕೂ ಬರೆದು ತಿಳಿಯಿರಿ.**

**ಪ್ರಕಟನ ಶಾಖೆ:—**

**ಅಂತರಂಗ, ಉಡುಪಿ.**

# ಅಂತರಂಗ

# ANTARANGA

ಂಪುಟ ೧ / ಂಚಿಕೆ ೧



ರವಿವಾರ



ಜುಲಾಯಿ ೧೭, ೧೯೩೮


## ಸ್ವಾತಂತ್ರ್ಯ

ಸ್ವಾತಂತ್ರ್ಯವಿಲ್ಲದಿದ್ದರೆ ನೀತಿಯು ಎಂದೂ ಉಳಿಯಲಾರದು; ಏಕೆಂದರೆ ಒಳಿತು ಕೆಡುಕುಗಳಲ್ಲಿ, ಸರ್ವಸಾಮಾನ್ಯ ಪ್ರಗತಿ ಮತ್ತು ಸ್ವಾರ್ಥಪರ ವಿಚಾರಗಳಲ್ಲಿ ಯೋಗ್ಯವಾದುದನ್ನು ಆರಿಸಿಕೊಳ್ಳುವ ಸ್ವಾತಂತ್ರ್ಯವಿಲ್ಲದಿದ್ದರೆ ಹೊಣೆಗಾರಿಕೆಯೆಂಬುದೇ ಇರಲಾರದು. ಸ್ವಾತಂತ್ರ್ಯವಿಲ್ಲದೆ ಯಾವ ಸಮಾಜವೂ ಬದುಕಲಾರದು; ಏಕೆಂದರೆ ಸ್ವತಂತ್ರ ಜನರೊಳಗೂ ದಾಸರೊಳಗೂ ಎಂದೂ ಮೈತ್ರಿಯಿರಲಿಕ್ಕಿಲ್ಲ. ವ್ಯಕ್ತಿಯ ಜೀವನವು ಪವಿತ್ರವಾದುದರಿಂದ ಅದರ ಪ್ರತಿನಿಧಿತ್ವವನ್ನು ವಹಿಸುವ ಸ್ವಾತಂತ್ರ್ಯವೂ ಪವಿತ್ರವಾಗಿದೆ. ಯಾವನು ತನ್ನ ಸ್ವಾತಂತ್ರ್ಯದ ಅಪಹಾರಕ್ಕೆಡೆಗೊಡುವನೋ ಅವನು ಮನುಷ್ಯಸ್ವಭಾವಕ್ಕೆ ವಿರೋಧಿಯಾಗಿರುವುದಲ್ಲದೆ ದೇವನಿಯಮಗಳನ್ನು ಉಲ್ಲಂಘಿಸುತ್ತಾನೆ. ಒಂದು ವರ್ಗ, ಒಂದು ಕುಟುಂಬ, ಅಥವಾ ಒಬ್ಬ ವ್ಯಕ್ತಿಯು ತನ್ನ ಸ್ಥಾನಾಧಿಕಾರದಿಂದ, ಎಲ್ಲಿ ತನ್ನ ಕುಲ ಇಲ್ಲವೆ ಸಂಪತ್ತಿನ ಹಕ್ಕಿನಿಂದ ಇತರರ ಮೇಲೆ ಅಧಿಕಾರ ನಡೆಸುವನೋ ಅಲ್ಲಿ ಸ್ವಾತಂತ್ರ್ಯವು ಇರಲಾರದು. ಸ್ವಾತಂತ್ರ್ಯವು ಸರ್ವರ ಹಕ್ಕಾಗಿರಬೇಕು; ಎಲ್ಲರೂ ಅದನ್ನು ಉಪಭೋಗಿಸುವಂತಾಗಬೇಕು.

— ಜೋಸೆಫ್ ಮ್ಯಾಝಿನಿ.

# ಅವರು ಹೇಳಿದ ಭವಿಷ್ಯಗಳೆಲ್ಲಾ ನಿಜವಾಗಿವೆ

## ಎಪ್ಪತ್ತೆರಡು ವರುಷಗಳ ಜಗದ್ವಿಖ್ಯಾತ ವ್ಯಕ್ತಿ!

ಸೌಮ್ಯವಾದ ಮುಖ. ವಿನೋದಾತ್ಮಕವಾದ ಅರೆ ನೋಟ ಲಂಡನಿನ "ರೀಜೆಂಟ ಪಾರ್ಕಿನಲ್ಲಿ" ಒಮ್ಮೊಮ್ಮೆ ಅಲೆದಾಡುತ್ತಾರೆ. ಅವರೇ ಯಚ್. ಜಿ. ವೆಲ್ಸ್. ಗ್ರಂಥ ಕರ್ತರು. ಪ್ರಸಿದ್ಧ ವೈಜ್ಞಾನಿಕ ಚಿಂತಕರು. ಹಲವಾರು ಮಕ್ಕಳೊಡನೆ ನಗೆಯಾಡುತ್ತಾ ನಡೆಯುವುದೆಂದರೆ ವೆಲ್ಸರಿಗೆ ಬಹು ಇಷ್ಟ.

**ಮುದಕನಾದರೂ ತರುಣ**

ಬರುವ ಸೆಪ್ಟಂಬರ್ ತಿಂಗಳಲ್ಲಿ ತನ್ನ ಎಪ್ಪತ್ತೆರಡನೆಯ ಜನ್ಮದಿನೋತ್ಸವವನ್ನು ವೆಲ್ಸರು ಆಚರಿಸಲಿದ್ದಾರೆ. ಯುದ್ಧೋನ್ಮತ್ತ ಜಗತ್ತಿನ ಹಲವಾರು ಸಂಸ್ಥೆಗಳಿಗೆ ವೆಲ್ಸರು ರಾಜೀನಾಮೆಯಿತ್ತು ಶಾಂತ ಜೀವನವನ್ನು ನಡೆಸಲಿಚ್ಛಿಸಿದರೂ ಅವರು ಸುಮ್ಮಗಿರುವಂತಿಲ್ಲ. ಹೊಸ ಹೊಸ ಅಭಿಪ್ರಾಯಗಳು ಹೊಸ ಭಾವಗಳು ಅವರ ಮೆದುಳಿನಿಂದುತ್ಪನ್ನವಾಗುತ್ತಿವೆ.

**ಜಗತ್ತಿನ ಭವಿಷ್ಯವಾದಿ**

ಬೇಸರವೆನಿಸಿದಾಗ ತಮ್ಮ ಮನೆಯ ಬಳಿಯಲ್ಲಿರುವ ಚಲಚ್ಚಿತ್ರ ಶಾಲೆಗೆ ಹೋಗಿ ಚಿಕ್ಕ ಮಕ್ಕಳಂತೆಯೇ ಕಲೆಯಲ್ಲಿ ತನಗಿರುವ ಅಭಿರುಚಿಯನ್ನು ವ್ಯಕ್ತಪಡಿಸುತ್ತಾರೆ. "ಥಿಂಗ್ಸ್ ಟು ಕಮ್" ಎಂಬ ಚಲನಚಿತ್ರವನ್ನು ತಯಾರಿಸಿ ವೆಲ್ಸರು ಜಗತ್ತಿನ ಭವಿಷ್ಯವನ್ನು ಜನತೆಗೆ ತೋರಿ ಬೆರಗುಗೊಳಿಸಿದ್ದಾರೆ. ಈ ಚಿತ್ರವು ಅವರಿಗೆ ಸಾವಿರಾರು ಪವನುಗಳ ಆದಾಯವನ್ನುಂಟುಮಾಡಿಕೊಟ್ಟಿದೆ. ಇನ್ನೂ ಹಲವು ಚಿತ್ರಗಳನ್ನು ವೆಲ್ಸರು ಜಗತ್ತಿಗೆ ಕೊಡಲು ದುಡಿಯುತ್ತಿದ್ದಾರೆ.

**"ಚಂದ್ರಲೋಕದ ವ್ಯಕ್ತಿ"**

ಎಪ್ಪತ್ತೆರಡು ವರುಷದ ಮುದುಕನಾದರೂ ಇನ್ನೊಂದು ಗೃಹದಿಂದ ಜಗತ್ತಿಗೆ ಬಂದಿರುವ ವ್ಯಕ್ತಿಯಂತೆ ವೆಲ್ಸರು ಅಸಾಮಾನ್ಯ ಉತ್ಸಾಹವನ್ನು ಪ್ರತಿಯೊಂದು ವಿಚಾರದಲ್ಲಿಯೂ ತೋರುತ್ತಿದ್ದಾರೆ. ಚಂದ್ರಲೋಕದಿಂದ ಈಗ ತಾನೇ ಬಂದವರಂತೆ ಭವಿಷ್ಯವಾಡುತ್ತಿದ್ದಾರೆ. ಅನೇಕ ಗ್ರಂಥಗಳನ್ನು ಬರೆದು ಜಗತ್ತನ್ನು ಸೃಗುಟ್ಟಿಸಿದ್ದಾರೆ.

> **ಭಾವೀ ಜಗತ್ತಿನಲ್ಲಿ ಇಂದಿನಂತೆ ವಿವಾಹ ನಿಯಮಗಳಿರಲಾರವು. ತರುಣ ತರುಣಿಯರು ಕುರುಡು ಪದ್ಧತಿಗಳನ್ನು ಧಿಕ್ಕರಿಸಿ ಸುಖಮಯ ವೈವಾಹಿಕ ಜೀವನವನ್ನು ನಡೆಸುವರು ಎಂಬ ಭವಿಷ್ಯವಾಡಿದ್ದಾರೆ.**

**ಬಡತನದ ಬಾಳು**

ಕೀರ್ತಿಯ ತುತ್ತ ತುದಿಗೇರಿರುವ ಈ ಮಹಾಶಯರು ಜಗತ್ತಿನ ಮಹಾವ್ಯಕ್ತಿಗಳಲ್ಲಿ ಹೆಚ್ಚಿನವರಂತೆ ಬಡಕುಟುಂಬದಲ್ಲಿ ಜನಿಸಿದವರು. ಇತರ ಯುವಕರು ವಿಶ್ವವಿದ್ಯಾಲಯಕ್ಕೆ ಆಡಂಬರದಿಂದ ಹೋಗುತ್ತಿದ್ದಾಗ ವೆಲ್ಸರು ವಿಂಡ್ಸರ್ ಪಟ್ಟಣದ ಅಂಗಡಿಯೊಂದರಲ್ಲಿ ದುಡಿಯುತ್ತಿದ್ದರು.

**"ನಾನು ಪತ್ರಿಕೋದ್ಯಮಿ"**

"ಕಲಾವಿದನೆಂದು ಕರೆಸಿಕೊಳ್ಳುವುದಕ್ಕಿಂತಲೂ ಪತ್ರಿಕೋದ್ಯಮಿಯೆಂಬ ಹೆಸರೇ ನನಗೆ ಪ್ರಿಯವಾಗಿದೆ" ಯೆಂದು ವೆಲ್ಸರು ಹೇಳುವುದುಂಟು. ಹೀಗೆಯೇ ಪ್ರಸಿದ್ಧ ಇಂಗ್ಲಿಷ ಕಾದಂಬರಿಗಾರರಾದ ಎಡ್ಗಾರ್ ವಾಲೆಸ್‌ರವರೂ ತಾನು ಪತ್ರಿಕೆಯ ಸುದ್ದಿಗಾರನೆಂದು ಹೇಳುವುದಿದೆ.

**ಕಲೆತು-ಕಲಿಯಬೇಕು.**

ಪ್ರಸಿದ್ಧ ವ್ಯಕ್ತಿಯಾದರೂ ಇವರಿಗೆ ಅಹಂಭಾವವು ಬಹಳ ಕಡಿಮೆ. ಕುಬೇರರಿಂದ ಮೊದಲ್ಗೊಂಡು ಕುರುಬರ ತನಕವೂ ಅವರು ಆದರಿಸುತ್ತಾರೆ. ಇತರರೊಡನೆ ಬೆರೆಯುವ ವಿಚಾರದಲ್ಲಿ ಅವರೇ ಹೀಗನ್ನುತ್ತಾರೆ. "ನಾನು ಎಲ್ಲಾ ತರದ ಜನರೊಡನೆ ಬೆರೆಯುತ್ತೇನೆ— ಸಿರಿವಂತರು, ದರ್ಜಿಗಳು, ಕೆಲಸದ ಹುಡುಗಿಯರು, ವರ್ತಕರು—ಅವರು ಇವರೆಂದಿಲ್ಲ—ಎಲ್ಲರೊಡನೆಯೂ ಕಲೆತು ಮಾತಾಡುತ್ತೇನೆ. ಅವರೆಲ್ಲರೊಡನೆ ಕಲೆತರೆ ಜಗತ್ತಿನ ಪರಿಚಯವು ನನಗಾಗುತ್ತದೆ. ಪ್ರತಿಯೊಬ್ಬರು ನನ್ನಂ

ತೆಯೇ ಸ್ವಾತಂತ್ರ್ಯ, ಸುಖ ಶಾಂತಿಗಳನ್ನು ಪಡೆಯ ಬೇಕೆಂಬುದು ನನ್ನ ಆಶೆಯಾಗಿದೆ."

**ವೈವಾಹಿಕ ಜೀವನ**

ಅಂಗಡಿಯಲ್ಲಿ ದುಡಿಯುತ್ತಿದ್ದ ಯುವಕನು ಸ್ವಲ್ಪ ಸಮಯದಲ್ಲಿಯೇ ವಿಜ್ಞಾನಾಧ್ಯಾಪಕನಾಗುವಂತಾಯಿತು. ಇಪ್ಪತ್ತೈದನೆ ವಯಸ್ಸಿನಲ್ಲಿ ವೆಲ್ಸನಿಗೆ ಮದುವೆಯಾದರೂ ಅದು ಯಶಸ್ವಿಯಾಗಲಿಲ್ಲ. ಇತ್ತೀಚೆಗೆ ಪ್ರಕಟವಾದ ಆತ್ಮಚರಿತ್ರೆಯಲ್ಲಿ ವೆಲ್ಸರು ಹಾಗೆ ಅಭಿಪ್ರಾಯಪಟ್ಟಿದ್ದಾರೆ. ಮಡದಿಯನ್ನು ಬಿಟ್ಟು ಅವರು ಎಮಿ ಕ್ಯಾದರಿನ್ ರಾಬಿನ್ಸ್ ಎಂಬನ್ನ ವಿದ್ಯಾರ್ಥಿನಿಯೊಂದಿಗೆ ಜೀವಿಸಿದರು.

**ನಿರ್ಭೀತ ವ್ಯಕ್ತಿ**

ಲೈಂಗಿಕ ವಿಚಾರಗಳಲ್ಲಿ ಮುಚ್ಚುಮರೆಯಿಲ್ಲದೆ ಸ್ಪಷ್ಟವಾಗಿ ತನ್ನ ಅಭಿಪ್ರಾಯಗಳನ್ನು ಅವರು ಹೇಳತೊಡಗಿದುದು ವಿದ್ಯಾರ್ಥಿನಿಯನ್ನು ತಾನು ಮದುವೆ ಮಾಡಿಕೊಳ್ಳುವ ಮೊದಲು. ಸಮಾಜದ ಪದ್ಧತಿಗಳಿಗೆ ಬೆದರದೆ ಪ್ರೇಮಪ್ರಸಂಗಗಳ ಕುರಿತು ನಿರ್ಭೀತಿಯಿಂದ ವೆಲ್ಸರು ತನ್ನ ಅಭಿಪ್ರಾಯಗಳನ್ನು ಹೇಳತೊಡಗಿದರು. ಅಂದಿನಿಂದ ಅದೇ ರೀತಿಯಲ್ಲಿ ಹೇಳುತ್ತಾ ಬಂದಿದ್ದಾರೆ. ಇಷ್ಟು ಮಾತ್ರವಲ್ಲ, ಭಾವೀ ಜಗತ್ತಿನಲ್ಲಿ ವಿವಾಹದ ಭವಿಷ್ಯವನ್ನು ಅವರು ಹೇಳಿದ್ದಾರೆ.

**ವಿವಾಹಕ್ಕೆ ನಿಯಮವಿರಬಾರದು.**

**ಮದುವೆಯು ಇಂದಿನಂತೆಯೇ ಮುಂದೆ ಕೂಡಾ ಇರಲು ಸಾಧ್ಯವಿದೆ. ಇದು ಕಾಯಿದೆಯ ಬೆದರಿಕೆಯಿಂದ ಹೀಗಾಗುವುದಲ್ಲ. ಒಬ್ಬ ಪುರುಷನೊಡನೆ ಒಂದೇ ಸ್ತ್ರೀಗೆ** ಪ್ರೇಮವಿರುವುದು ಸ್ವಭಾವಸಿದ್ಧವಾಗಿದೆ. ಏಕಪತ್ನೀ ಪದ್ಧತಿಯಿಂದ ವೈವಾಹಿಕ ಜೀವನವು ಸುಖಮಯವಾಗಿರುವುದಲ್ಲದೆ ಮಾನವ ಜಾತಿಯು ಆರಿಸಿಕೊಳ್ಳಲು ಯೋಗ್ಯವಾಗಿದೆ. ಈ ಪದ್ಧತಿಯನ್ನನುಸರಿಸಲು ಯಾವುದೇ ನಿಯಮಗಳಿಲ್ಲದಿದ್ದರೆ ಹೆಚ್ಚಿನವರು ಸುಖದಿಂದ ಜೊತೆಯಾಗಿದ್ದು ಬಹುಕಾಲದ ತನಕ ದಾಂಪತ್ಯ ಜೀವನವನ್ನು ನಡೆಸುವರೆಂಬುದರಲ್ಲಿ ನಿರ್ವಿವಾದ.



**ಅಂಧಾಚಾರಿಗಳ ನಿಷೇಧ**

ಈ ತರದ ನಿರ್ಭಯ ಅಭಿಪ್ರಾಯಗಳಿಂದಾಗಿ ಪ್ರಾರಂಭದಲ್ಲಿ "ಏನ್ ವೆರೋನಿಕಾ" ಮೊದಲಾದ ಕಾದಂಬರಿಗಳ ಕುರಿತು ದೊಡ್ಡ ಗೊಂದಲವೆಬ್ಬಿಸಲ್ಪಟ್ಟಿತು. ತಾನು ಮೆಚ್ಚಿದ ಪುರುಷನನ್ನು ಪಡೆಯುವುದಕ್ಕಾ

ತುಂಬಾ ಶ್ರಮಿಸಿ ಕೊನೆಗೆ ಅವನನ್ನು ಹೊಂದಿದ ತರುಣಿ ಯೊಬ್ಬಳ ಕಥೆಯಿದು. ಹಳೆ ಮನೋವೃತ್ತಿಯವರಿಗೆ ಇದು ರುಚಿಸಲಿಲ್ಲ. ಪುಸ್ತಕ ಭಾಂಡಾರಗಳಲ್ಲಿ ಈ ಪುಸ್ತಕವಿರ ಬಾರದೆಂಬ ನಿಷೇಧವಾಯಿತು

### ವೈಜ್ಞಾನಿಕ ಕಾದಂಬರಿಗಳು

ಆದರೆ ತನ್ನ ವೈಜ್ಞಾನಿಕ ಕಾದಂಬರಿಗಳಿಂದ ವೆಲ್ಸರು ಮೊದಲೇ ಜನಪ್ರೀತರಾಗಿದ್ದರು. ಅವರ ಕಾದಂಬರಿಗಳು ಮಿಲಿಯಗಟ್ಟಲೆ ಜನರ ಮನಸ್ಸುಗಳನ್ನು ಅಪಹರಿಸಿವೆ. ಅವರು ಈಗಲೂ ಅಂತಹ ಕಾದಂಬರಿಗಳನ್ನು ಬರೆಯುತ್ತಿರಬೇಕೆಂದು ಆಶಿಸುವ ಅದೆಷ್ಟೋ ಮಂದಿ ಈಗಲೂ ಇದ್ದಾರೆ. ಅಂದು ಹೇಳಿದ ಭವಿಷ್ಯಗಳೆಲ್ಲಾ ವೆಲ್ಸರ ಕಾಲದಲ್ಲಿಯೇ ನಿಜವಾಗಿ ಪರಿಣಮಿಸಿವೆ. ಅವರು ಹೇಳಿದ ಇನ್ನೂ ಅನೇಕ ಭವಿಷ್ಯಗಳಿವೆ. ಕಲ್ಪನೆಯೆಂದು ಪ್ರಸಿದ್ಧಿಸಲ್ಪಟ್ಟ ಅವುಗಳು ಕೂಡಾ ಮುಂದೆ ಕಾರ್ಯರೂಪಕ್ಕೆ ಬರಲಾರವೆನ್ನಲಾಗುವುದಿಲ್ಲ.

### ಐರಿಷ್ ಭಿಕಾರಿಯ ಸ್ನೇಹ

ಯುವಕನಾಗಿದ್ದಾಗ ವೆಲ್ಸರು ಕಾಸಿಲ್ಲದೆ ಬೀದಿಗಳಲ್ಲಿ ತಿರುಗುತ್ತಿದ್ದ ಒಬ್ಬ ಐರಿಷ್ ಯುವಕನ ಮೈತ್ರಿಯನ್ನು ಸಂಪಾದಿಸಿದ್ದರು. ಈಗಲೂ ಅವರೊಳಗಿನ ಸಖ್ಯವು ಹಾಗೆಯೇ ಇದೆ. ಹಲವಾರು ಮೈಲುಗಳ ತನಕ ನಗೆಯಾಡಿ ಮಾತಾಡಿಕೊಂಡಿದ್ದ ಐರಿಷ್ ಯುವಕರೇ ಇಂದಿನ ಜಗತ್ಪ್ರಸಿದ್ಧ ವ್ಯಕ್ತಿ ಜಾರ್ಜ್ ಬರ್ನಾರ್ಡ್ ಷಾರವರು.

### ವಿದ್ಯಾರ್ಥಿನಿಯೊಡನೆ ವಿವಾಹ

೧೮೯೩ರಲ್ಲಿ ವೆಲ್ಸರು ತನ್ನ ವಿದ್ಯಾರ್ಥಿನಿಯಾಗಿದ್ದ ಎಮಿ ಕೆದರಿನ್ ರಾಬಿನ್ಸ್‌ಳನ್ನು ಮದುವೆಯಾಗಿ ಸಾಹಿತ್ಯಕ್ಕಾಗಿ ತನ್ನ ಜೀವನವನ್ನು ಸವೆಯಿಸಲಾರಂಭಿಸಿದರು. ಮನೆ ಜವಾಬ್ದಾರಿಯನ್ನು ವೆಲ್ಸರು ವಹಿಸಬೇಕಾಯಿತು. ಮಾತ್ರವಲ್ಲ, ಎರಡು ಮಕ್ಕಳ ತಂದೆಯಾಗುವ ಭಾಗ್ಯವು ಅವರದಾಯಿತು. ಅವರ ಪುತ್ರ ಫ್ರೇಂಕ್ ವೆಲ್ಸ್ ಜಲಚ್ಚಿತ್ರ ಪ್ರಪಂಚದಲ್ಲಿ ಚಿತ್ರಗಳ ನಿರ್ದೇಶಕತ್ವವನ್ನು ವಹಿಸಲು ತರಬೇತಿಯನ್ನು ಪಡೆಯುತ್ತಿದ್ದಾನೆ.

### ಸೈಕಲ್ ಸವಾರ

ಅನಾರೋಗ್ಯವು ಬಹುಕಾಲದ ತನಕ ವೆಲ್ಸರನ್ನು ಬಾಧಿಸಿತ್ತು. ಕಾಲು ಚೆಂಡಾಟದಲ್ಲಿ ಬಿದ್ದು ಗಾಯವಾಗಿ ತನ್ನ ಇಪ್ಪತ್ತೈದನೆಯ ಜನ್ಮದಿನೋತ್ಸವವನ್ನು ಅವರು ಹಾಸಿಗೆಯಲ್ಲಿಯೇ ನಡೆಸಬೇಕಾಯಿತು. ಸೈಕಲ್ ಸವಾರಿಯೆಂದರೆ ವೆಲ್ಸರಿಗೆ ಬಹಳ ಪ್ರೇಮ. ಆಯುರಾಗಿದ್ದಾಗ ಅವರಿಗೆ ಒಬ್ಬ ಹುಡುಗನ ಸ್ನೇಹವಾಯಿತು. ಅವರಿಗೆ ಸೈಕಲ್ ವಿಚಾರದ ಒಂದು ಪತ್ರಿಕೆಯನ್ನು ನಡೆಸಬೇಕೆಂದಾಯಿತು. ಅಂದು ಚಿಕ್ಕ ಪತ್ರಿಕೆಯನ್ನು ಸ್ಥಾಪಿಸಿ ಈಗ ಇಂಗ್ಲೆಂಡಿನ ಮಹತ್ವದ ಅನೇಕ ಪತ್ರಿಕೆಗಳ ಒಡೆತನವನ್ನು ವಹಿಸುವ ಭಾಗ್ಯವು ಈಗಿನ ಲಾರ್ಡ್ ನಾರ್ತ್‌ಕ್ಲಿಫ್ ರವರದಾಯಿತು.

ಇಂದು ಕೂಡಾ ವೆಲ್ಸರು ದೈನಂದಿನದ ವ್ಯಾಯಾಮವನ್ನು ಮಾಡಲು ಮರೆಯುವುದಿಲ್ಲ. ಬ್ಯಾಡ್‌ಮಿಂಟನ್ ಆಟವೆಂದರೆ ಅವರಿಗೆ ಬಹಳ ಇಷ್ಟ. ಈಗಲೂ ಬಹಳ ಅಭಿರುಚಿಯಿಂದ ಅವರು ಆಡುತ್ತಿದ್ದಾರೆ

### ಯುದ್ಧದೊಡನೆ ಯುದ್ಧ!

ಯುವಕರಲ್ಲಿ ವೆಲ್ಸರಿಗೆ ಅಪಾರ ವಿಶ್ವಾಸವಿದ್ದೆ ಯುದ್ಧದಿಂದಾಗಿ ಮಾನವ ಸಮಾಜದ ಪ್ರಾಮುಖ್ಯಾಂಶ್ವ ಸುಮ್ಮಗೆ ನಷ್ಟವಾಗುತ್ತದೆಂದು ಅವರು ಮಮ್ಮಲ ಮಗಿದ್ದಾರೆ. ತನ್ನ ಅಸಂಖ್ಯಾತ ವಾಚಕರಲ್ಲಿ ಇದೇ ಅಭಿಪ್ರಾಯವನ್ನು ಅನೇಕ ಪುಸ್ತಕಗಳ ಮೂಲಕ ಬೇರೂರಿಸಿದ್ದಾರೆ. 'ದಿ ಷೇಪ್ ಆಫ್ ಥಿಂಗ್ಸ್ ಟು ಕಮ್" ಎಂಬುದು ಸಮಾಜಶಾಸ್ತ್ರದ ಕುರಿತು ಬರೆದಿರುವ ಸಮರ್ಥ ಗ್ರಂಥವಾಗಿದೆ. ಈ ಚಲಚ್ಚಿತ್ರವನ್ನು ಕಂಡು ಲಕ್ಷಗಟ್ಟಲೆ ತಾಯಂದಿಯರು ತಮ್ಮ ಮನೆಗೆ ಹೋಗಿ ಮಕ್ಕಳನ್ನು ಮುದ್ದಿಸಿ ಮುಂದೆಂದೂ ಯುದ್ಧವಾಗದಿರಲೆಂದು ಪ್ರಾರ್ಥಿಸಿದ್ದಾರೆ.

### ಜಗತ್ತಿನ ಭವಿಷ್ಯ

ಯುರೋಪಿನಲ್ಲಾಗುತ್ತಿರುವ ಯುದ್ಧಕ್ಕಿಂತಲೂ ಮಹತ್ವದ ಯುದ್ಧವನ್ನು ಅವರು ಯುದ್ಧದೊಡನೆ ನಡೆಸಿದ್ದಾರೆ. ಆಂಗ್ಲ— ಅಮೇರಿಕಗಳ ನಾಗರಿಕತೆಯ ಭವಿಷ್ಯದ ಮೇಲೆ ಜಗತ್ತಿನ ಭವಿಷ್ಯವು ಹೊಂದಿಕೊಂಡಿದೆಯೆಂದು ಅವರು ನಂಬುತ್ತಾರೆ. ಲಂಡನ್ ನ್ಯೂಯಾರ್ಕ್‌ಗಳ ಧ್ವನಿವಾಹಕ ಯಂತ್ರಗಳ ಮುಂದೆ ವೆಲ್ಸರು ಹೀಗೆಂದು ಅನೇಕ ಬಾರಿ ಹೇಳಿದ್ದಾರೆ.

### ಭವಿಷ್ಯವಾದಿಯ ಭವಿಷ್ಯ

ಭವಿಷ್ಯವಾದಿ ಯಚ್. ಜಿ. ವೆಲ್ಸರ ಭವಿಷ್ಯವಾದರೂ ಏನು? ಅವರು ಈಗ ಚಲಚ್ಚಿತ್ರಗಳಲ್ಲಿ ಮಗ್ನರಾಗಿದ್ದಾರೆ. ಆಗಾಗ ಅಮೇರಿಕಕ್ಕೆ ಹೋಗಿ ಬರುತ್ತಿದ್ದಾರೆ. ಹೊಲಿವುಡ್ಡಿನಲ್ಲಿ ಕುಳಿತು ಪುಸ್ತಕಗಳಿಂದಲೂ ಚಲಚ್ಚಿತ್ರಗಳೇ



(೯ನೇ ಪುಟಕ್ಕೆ)

 ⁘ ೦ ತುಂತುರು ೦ ⁘ 

### ನಮಗೆ ಜಯ

ನಮ್ಮೂರಿನಲ್ಲಿ ರಾಮಪ್ಪನು ಹೇಳಿದ ಮಾತಿಗೆ ಯಾರೂ ಅಡ್ಡ ಬರುತ್ತಿರಲಿಲ್ಲ. ಕಾರಣವೇನೆಂದರೆ ಅವನು ಎರಡು ಮೂರು ವರುಷ ಮೈಸೂರಿನಲ್ಲಿದ್ದ. ನಮ್ಮೂರಲ್ಲಿ ಎಲ್ಲರೂ ಅವನನ್ನು ಸರ್ವಜ್ಞ ಎಂದು ತಿಳಿದಿದ್ದರು. ಒಂದು ದಿನ ಅವನು ನಮ್ಮ ಮನೆ ಜಗಲಿ ಮೇಲೆ ಕೂತುಕೊಂಡು ಯುದ್ಧದ ಸಮಾಚಾರ ತೆಗೆದ."

ನಮ್ಮ ಜನರು ಯುದ್ಧಕ್ಕೆ ಹೊರಟರೆ ಇಂಗ್ಲಿಷಿನವರು ಎಷ್ಟು ಜನ ಇದ್ದರೂ ನಮ್ಮವರೇ ಗೆದ್ದುಬಿಡುತ್ತಾರೆ. ದೇವರ ಪ್ರಾರ್ಥನೆ ಮಾಡಿದೆವು ಅಂದರೆ ನಮಗೆ ಜಯ ಖಂಡಿತ" ಎಂದ.

"ನಾವು ಸೋಲಬೇಕೆಂದು ಅವರು ದೇವರ ಪಾರ್ಥನೆ ಮಾಡಿದರೆ?" ಎಂದು ಶ್ಯಾಮ ಸವಾಲು ಮಾಡಿದ.

ರಾಮಪ್ಪನಿಗೆ ಬಂತು ಕೋಪ. ಕೂಡಲೆ ಬಂತು ಉತ್ತರ: "ಎಲೆ ಮಂಕಾ! ದೇವರಿಗೆ ಇಂಗ್ಲಿಷ್ ಭಾಷೆ ಬರುತದೆಯೇ?"

೦ ೦ ೦ ೦

---

ಪ್ರಬಲವಾದ ಮಾಧ್ಯಮಗಳೆಂದು ಅವರು ಹೇಳಿದ್ದಾರೆ. ಚಾರ್ಲ್ಸ್ ಚಾಪ್ಲಿನರೊಡನೆ ಸ್ನೇಹಾಚಾರ ಮಾಡಿ ತನ್ನ ಚಿತ್ರಗಳಿಗೆ ಅವರ ಸೂಚನೆಗಳನ್ನು ಪಡೆಯುತ್ತಿದ್ದಾರೆ. ಚ... ತ ಪ್ರಪಂಚದಲ್ಲಿ ಚಾರ್ಲಿ ಚಾಪ್ಲಿನರೇ ಅಗ್ರಗಣ್ಯರೆಂದು ವೆಲ್ಸರ ಅಭಿಮತ.

**ಉನ್ಮಾದ ಜಗತ್ತಿನಲ್ಲಿ!**

**ಅವರ ಭಾವನೆಯು ಯುವಕರಂತೆಯೇ ವೇಗವಾಗಿ ಮುನ್ನಡೆಯುತ್ತಿದೆ. ಉನ್ಮಾದ ಜಗತ್ತು ತನ್ನ ಹುಚ್ಚನ್ನು ಬಿಟ್ಟು ಬಿಟ್ಟರೆ ಅವರ ಯತ್ನಗಳೆಲ್ಲವು ನಾಳೆಯೇ ಫಲಕಾರಿಯಾಗುವುದೆಂದು ವೆಲ್ಸರು ನಂಬುತ್ತಾರೆ. ತಾರುಣ್ಯಗಲ್ಲಿರುವ ಮನಃಶಕ್ತಿಯನ್ನು ಅವರ ದೇಹದ ಹರೆಯ ಆವರಿಸುತ್ತಿದೆ. ವೆಲ್ಸರು ಮಾಡುವ ಕಾರ್ಯಗಳು ಇನ್ನು ಕೆಲವಿವೆ.**

---

### ಉತ್ಸಾಹ

**ಉಪಾಧ್ಯಾಯ:**— ರಂಗಾ, ಶ್ರೀ ರಾಮನ ತಂದೆ ಯಾರು?

ಗೋವಿಂದನು ತಾನು ಮುಂದಾಗಿ ಉತ್ತರ ಕೊಡಬೇಕೆಂಬ ಆಶೆಯಿಂದ– "ನಾನು ಸಾರ್"

೦ ೦ ೦ ೦

**ಪ್ರಯಾಣಿಕ:**— ಹೌದಪ್ಪಾ, ಈ ಮಾರ್ಗವು ಎಲ್ಲಿ ಹೋಗುತ್ತದೆ?

**ಇನ್ನೊಬ್ಬ:**— ಮಾರ್ಗವು ಎಲ್ಲಿಗೂ ಹೋಗುವುದಿಲ್ಲ ಸ್ವಾಮಿ; ಜನರು ಮಾತ್ರ ಅದರ ಮೇಲೆ ಹೋಗಿ ಬರುತ್ತಾರೆ.

೦ ೦ ೦ ೦

### ನಿಸ್ವಾರ್ಥಿ ಮಡದಿ

**ಗಂಡ:**— ನಿನ್ನ ಅತ್ತಿಗೆ ಒಂದು ಹೊಸ ಸೀರೆಯನ್ನು ತೆಗೆಸಿಕೊಡಬೇಕೆಂದಿದ್ದೇನೆ.

**ಹೆಂಡತಿ:** (ಜಾಣೆ)— ನನ್ನ ಅತ್ತಿಗೆ ಕೊಡಬೇಕೆಂದಿಲ್ಲ; ನನಗಷ್ಟು ಸ್ವಾರ್ಥವಿಲ್ಲ. ನಿಮ್ಮತ್ತಿಗೇ ತೆಗೆದು ಕೊಡಿರಿ.

೦ ೦ ೦ ೦

### ಯಾವ ಪತಿ?

**ಡಾಕ್ಟರ್:** (ರೋಗಿಯ ತಂದೆಯೊಡನೆ) ಏನ್ರೀ, ನಿಮ್ಮ ಮಗಳಿಗೆ ಹೋಮಿಯೋಪತಿಯೋ, ಎಲೋಪತಿಯೋ ನೇಚರಪತಿಯೋ ಯಾವ ಔಷಧ ಕೊಡಲಿ?

**ರೋಗಿಯ ತಂದೆ:**— ಯಾವ "ಪತಿ"ಯಾದರೇನು ಸ್ವಾಮಿ? ಕಾಹಿಲೆ ಗುಣವಾದರಾಯಿತು.

೦ ೦ ೦ ೦

### ಪರಿಚಯದ ಅಭಾವ

**ಹೆಂಡತಿ:**— ಆ ರಾಮನನ್ನು ನೋಡಿ, ಅವನು ತನ್ನ ಹೆಂಡತಿಗೆ ತಿಂಗಳಿಗೊಂದು ಹೊಸ ಸೀರೆ ತಂದು ಕೊಡುತ್ತಾನೆ. ನೀವೂ ಹಾಗೆಯೇ ಮಾಡಬಾರದೆ?

**ಗಂಡ:**— ಆದರೆ.... ನನಗವಳ ಪರಿಚಯವಿಲ್ಲವಲ್ಲ.

# ಸಂದೇಶ.

ಅಂತರಂಗದ ಸಂಪಾದಕರಿಗೆ,

ಜನರಲ್ಲಿ ಇತ್ತೀಚೆಗೆ ಬಾಹ್ಯಾಡಂಬರಗಳು ವಿಶೇಷವಾಗಿ ಬೆಳೆಯುತೊಡಗಿವೆ. ತಾನು ಸ್ವಾರ್ಥತೆಯಲ್ಲಿ ಮುಳುಗಿರುವವನು ಸಂಪೂರ್ಣ ನಿಃಸ್ವಾರ್ಥಿಯೆಂದು ತೋರಿಸಿ ಕೊಳ್ಳುತ್ತಿದ್ದಾನೆ. ಜಾತೀಯತೆಯೇ ಧ್ಯೇಯವಾಗಿರುವವನು ಬಹಿರಂಗದಲ್ಲಿ ರಾಷ್ಟ್ರೀಯತೆಯನ್ನು ಯಥೇಷ್ಟವಾಗಿ ಪ್ರದರ್ಶಿಸುತ್ತಿದ್ದಾನೆ. ದ್ವೇಷಾಸೂಯೆಗಳಿಂದ ತುಂಬಿ ಕೊಂಡಿರುವವನು ಇತರರನ್ನು ಕ್ಷುದ್ರಮನೋವೃತ್ತಿಯವರು, ಸಂಕುಚಿತ ಮನೋವೃತ್ತಿಯವರು ಎಂದು ಧೈರ್ಯದಿಂದ ಹೇಳುತ್ತಿದ್ದಾನೆ. ಅಧಿಕಾರವನ್ನು ಹೊಂದುವುದಕ್ಕಾಗಿ ಯಾವ ಅಲ್ಪ ಕಾರ್ಯವನ್ನೂ ಮಾಡಲು ಸಿದ್ಧನಿರುವವನು ಇತರರು ಹೇಗೆ ಅಧಿಕಾರಕ್ಕೆ ಬಂದರೆಂದು ಉತ್ಸಾಹದಿಂದ ವಿವರಿಸುತ್ತಿದ್ದಾನೆ. ತನ್ನ ಜೀವನದಲ್ಲಿ ಯಾವ ನಿಯಮವೂ ಇಲ್ಲದೆ ಸ್ವೇಚ್ಛಾವೃತ್ತಿಯಲ್ಲಿರುವವನು ಇತರರ ನಡತೆಯನ್ನು ಮನಬಂದಂತೆ ಟೀಕಿಸುತ್ತಿದ್ದಾನೆ. ತನ್ನ ನಡೆನುಡಿಗಳಲ್ಲಿ ಸಂಪೂರ್ಣ ನಾಸ್ತಿಕನಾಗಿರುವವನು ಧರ್ಮ, ದೇವರು ಎಂದು ಸದಾ ಹೇಳುತ್ತಿದ್ದಾನೆ. ಹೀಗಾಗಿ ನಿಜವಾದ ನಿಃಸ್ವಾರ್ಥಿ, ಪರೋಪಕಾರಿ, ದೇಶಭಕ್ತ, ಸಾತ್ವಿಕ ಪುರುಷರು ಯಾರೆಂದು ತಿಳಿದುಕೊಳ್ಳುವುದೇ ಕಷ್ಟವಾಗಿದೆ. ವೇಷಧಾರಿಗಳ ಮಧ್ಯದಲ್ಲಿ ನಿಜವಾದವರನ್ನು ಹುಡುಕಿ ತೆಗೆಯಬೇಕು. ವೇಷಧಾರಿಗಳ ಬಣ್ಣವನ್ನು ತೆಗೆದು ಅವರ ನಿಜಸ್ಥಿತಿಯನ್ನು ಹೊರಗೆ ಹಾಕಬೇಕು. ಅವರು ಬೋಧಿಸುವ ಮಹಾ ತತ್ವಗಳ ರಹಸ್ಯವೇನೆಂದು ಕಂಡು ಹುಡುಕ ಬೇಕು. ಇದೇ ಪತ್ರಿಕೆಗಳ ಕರ್ತವ್ಯ.

ನಿಮ್ಮ ಪತ್ರಿಕೆಗೆ ಈ ಉದ್ದೇಶವಿರುವುದರಿಂದಲೇ ಅದಕ್ಕೆ ಅಂತರಂಗವೆಂದು ನಾಮಕರಣವಾಗಿದೆ ಎಂದು ನೆನಸುತ್ತೇನೆ. ಅಂತರಂಗವು ತನ್ನ ಉದ್ದೇಶವನ್ನು ಪೂರೈಸಿ ಕೊಂಡು ದೇಶದ ಕಲ್ಯಾಣಕ್ಕೆ ಸಹಾಯವಾಗಲೆಂದು ಹಾರೈಸುತ್ತೇನೆ.

ಕಾರ್ಕಳ
7-7-1938

ಪಾದೂರು ವಾಸುದೇವ ಉಪಾಧ್ಯಾಯ,
ಬಿ. ಎ. ಎಲ್ ಎಲ್. ಬಿ. ವಕೀಲ್.

# ಮತ್ತೇನು ವಿಶೇಷ?

ಕತೆಗಾರ:
**ಎಸ್. ವಿಠಲ ಹೆಗ್ಡೆ**

ಎದ್ದು ಕುಳಿತು ಗೋಡೆಯ ಕಡೆಗೆ ನೋಡುತ್ತೇನೆ- ಗಡಿಯಾರದಲ್ಲಿ ಎಂಟರ ಮೇಲೆ ಐದು ಮಿನಿಟು ಆಗಿ ಹೋಗಿತ್ತು 'ಛೆ! ಇಷ್ಟು ಹೊತ್ತಾಯಿತೆ!' ಎಂದು ಕೂಡಲೇ ಎದ್ದೆ. ಶರ್ಟನ್ನು ಹಾಕಿಕೊಳ್ಳುವಾಗ 'ಯಾವ ದಿಕ್ಕಿಗೆ ಹೋಗುವದು ಎಂಬ ಯೋಚನೆ ಬಂತು. "ನಾಣು ಇಷ್ಟು ಹೊತ್ತಿನಲ್ಲೀ ಕಾಫಿಕುಡಿದು ಹೋಗಿರ ಬೇಕು. ಏಳು ಹೊಡೆಯುವ ಮೊದಲೇ ಹೊಟ್ಟೆ ತಣಿಸಿಕೊಳ್ಳುವ ಅಭ್ಯಾಸವವನದು. ಇಷ್ಟು ಹೊತ್ತಿನಲ್ಲಿ ಮಾಣೀ ವಿಲಾಸಕ್ಕೆ ಬಂದು ಹೋದನೇನೊ. ಇನ್ನೆಲ್ಲಿ ಹೋಗಿ ಕಾಫಿ ಕುಡಿಯಲಿ?" ಸರಿ. ಒಮ್ಮೆ ಹೊರಗೆ ಹೋಗೋಣ—ಏನಾದರೂ ಆದೀತೆಂದುಕೊಂಡು ಕೆಳಗಿಳಿದೆ. ಇದಿರಿನ ಜಂತಿಯಲ್ಲಿ ಶ್ಯಾಮನ ಕೊಡೆ ನೇತಾಡುತ್ತಿತ್ತು. ಶ್ಯಾಮನಿಗಿನ್ನೂ ಏಳಲು ಹೊತ್ತಾಗಲಿಲ್ಲ; ಮಲಗಲಿ! ಎಲ್ಲಿಯಾದರೂ ಮಳೆಬಂದು ಬಿಟ್ಟರೆ, ನನಗೂ ಅನುಕೂಲವೇ ಆಯಿತು-ಎಂದುಕೊಂಡು ಕೊಡೆಯನ್ನು ಕಂಕುಳೊಳಗೆ ಸೇರಿಸಿ ರಸ್ತೆಗಿಳಿದೆ. ನಾಲ್ಕು ಮಾರು ಹೋಗುವಷ್ಟರಲ್ಲಿ ಯಾರೋ ಒಬ್ಬರು ಇದರಿಗೆ ಸಿಕ್ಕಿದರು 'ನಮಸ್ಕಾರ ಸ್ವಾಮಿ' ಎಂದರು. ಅವರು ಪರಿಚಯಸ್ಥರಲ್ಲ; ನನ್ನ ತಲೆಯಲ್ಲಿ ಯೋಚನೆ ಬೇರೆಯಿತ್ತು- ಹೀಗಾಗಿ ಅವರ ಮೊದಲನೆ 'ನಮಸ್ಕಾರ ಸ್ವಾಮಿ'ಯು ಕನಸ್ಸಿನಲ್ಲಿ ಕೇಳಿದ ಮಾತಿನಂತೆ ನನಗೆ ಕೇಳಿಯೂ ಕೇಳಿಸದ ಹಾಗಾಯಿತು. ಅವರು ಸ್ವಲ್ಪ ಗಟ್ಟಿಯಾಗಿ ಮತ್ತೊಮ್ಮೆ 'ನಮಸ್ಕಾರ, ಸ್ವಾಮಿ!' ಎಂದರು. ನನಗೆ ಬೇಕಾಗಿದ್ದುದು ಸಿಂಗಲ್ ಕಾಫಿ ಹೊರತು ಡಬ್ಬಲ್ ನಮಸ್ಕಾರವಲ್ಲವಾದುದರಿಂದ ಅದನ್ನು ಕೂಡಲೇ ವಾಪಾಸು ಮಾಡಿದೆ. 'ಮತ್ತೇನು ವಿಶೇಷ?' ಎಂದರು ಅವರು. ಹೀಗೆ ಗುರುತವಿಲ್ಲದವರಿಗೆ ನಮಸ್ಕಾರ ಕೊಟ್ಟು ಮಾತನಾಡಿಸುವುದು ಸ್ವಲ್ಪ ವಿಶೇಷವೆಂದು ನನಗೆ ತೋರಿತು. ಆದರೂ 'ವಿಶೇಷವೇನೂ ಇಲ್ಲ' ಎಂದು ಮುಂದುವರಿದೆ. ಹರಾಜುಗಲ್ಲಿ, ಅನ್ಸಾರೀ ರೋಡು, ಸಂತೆಕಟ್ಟೆಗಳನ್ನು ಹಾದು ಮೈದಾನು ರಸ್ತೆಗೆ ಬರುವಾಗ ಘಂಟೆ ಹತ್ತು ಹೊಡೆಯಿತು. 'ರಾಮು ಆಫೀಸಿಗೆ ಹೊರಟವ ಇದಿರಾಗಲೂ ಬಹುದು. ಸುಂದರ ಶೆಣೈ ಅಂಗಡಿ ಬಾಗಿಲು ತೆಗೆದಿದ್ದರೆ ಅದೂ ಆಗಬಹುದು. ಇಲ್ಲದಿದ್ದರೆ ಯಾರಾದರೂ ಸಿಕ್ಕದೆ ಹೋದಾರೆ!' ಎನ್ನುತ್ತಾ ಎಡ ಬಲಕ್ಕೆ ನೋಡಿಕೊಂಡು ಬರುತ್ತಿದ್ದೆ. ನಮಸ್ಕಾರವನ್ನು ಕೊಟ್ಟು ಪಡೆಯುವವರು, ಪಡೆದು ಕೊಡುವವರು. ಈ ಮಧ್ಯೆ ಹಲವರು ಸಿಕ್ಕಿದರು. ನಮಸ್ಕಾರದ ಬದಲಾವಣೆ ನಡೆದೊಡನೆ ಅವರಿದಿರು ನಗುತ್ತಾ ಸ್ವಲ್ಪ ನಿಲ್ಲುವದು; ಅವರು 'ಮತ್ತೇನು ವಿಶೇಷ?' ಎಂದೊಡನೆ 'ವಿಶೇಷವೇನೂ ಇಲ್ಲ. ಓ ಅಲ್ಲಿ ಸ್ವಲ್ಪ ಕೆಲಸವಿದೆ' ಎಂದು ಮುಂದೆ ಹೊರಡುವುದು—ಆ ಹತ್ತು ಘಂಟೆಯ ವರೆಗೆ ಇಷ್ಟು ರಸ್ತೆಗಳ ಉದ್ದಕ್ಕೂ ಸಂದು ಸಂದಿಗೆ ನಾನು ಮಾಡುತ್ತಾ ಬಂದ ಕೆಲಸವಿಷ್ಟೆ. ಕ್ರಾಪ್ ಬಾಚಿಕೊಂಡ ಒಬ್ಬಿಬ್ಬರು ನನಗೆ ರಾಮುನ ಹಾಗೆ ಕಂಡುಬಂದು 'ಓಹೋಹೋ' ಎಂದು ನಾನು ಇದಿರು ನಿಂತೊಡನೆ ಅವರು 'ಮತ್ತೇನು ವಿಶೇಷ?' ಕೇಳಿ ಹೋಗಿಬಿಡುತ್ತಿದ್ದರು. ಕೊನೆ ಕೊನೆಗೆ ಹೊಟ್ಟೆಯುರಿ ಕೇಳದೇನೇ ಹೇಳುವಷ್ಟು ವಿಶೇಷವಾದರೂ, ಇದು ಹಿಂದುಸ್ಥಾನ — ಆ ಹಿಂದುಸ್ಥಾನದಲ್ಲಿ ಇದು ನಮ್ಮ ಊರು—ಎಂಬುದು ನೆನಪಿಗೆ ಬಂದು ಇಲ್ಲಿ ವಿಶೇಷವಲ್ಲದ ಈ ವಿಶೇಷವನ್ನು ಯಾರೊಡನೆಯೂ ಹೇಳಲಿಲ್ಲ. ಹತ್ತು ಗಂಟೆಯ ವರೆಗೂ ಸಿಂಗಲ್ ಕಾಫಿ ತೆಗೆದುಕೊಳ್ಳಲಿಲ್ಲವೆಂದರೆ! 'ಇನ್ನೇನು, ಮಾರ್ಕೆಟ್ ರೋಡೊಂದುಂಟು-ಅದನ್ನೇಕೆ ಬಿಡುವದೆಂದು [illegible] ಕಡೆಗೆ ಹೊರಟೆ. 'ನೆರ್ ನುರ್' ಎಂದು ಜೋಡುಗಳು ವಂದಿಮಾಗಧರಂತೆ ಘನಸ್ತಿಕೆಯನ್ನು ಸಾರುತ್ತಿದ್ದಂತೆ ಜಮೀನ್ದಾರ್ ವೈಕುಂಠ ರಾಯರ ಸವಾರಿ ಇದಿರು ಬಂತು. ತಲೆಯಲ್ಲಿ ದೊಡ್ಡದಾದ ಕೆಂಪು ಮುಂಡಾಸು. ಕೈಲಾಸಾಧಿಪನ ಜೆಡೆಗೆ ಸುತ್ತಿಕೊಂಡ ಫಣಿಗಳಂತೆ ಆ ಮುಂಡಾಸಿನ ಇದಿರುಗಡೆ ಗುಣಾಕಾರ ಗುರ್ತಿನಲ್ಲಿ ನಿಂತ ಬಿಳಿ ಜರಿ. ದೊಡ್ಡ ಹೊಟ್ಟೆಯ ಮೇಲೆ ದಪ್ಪ ಕೋಟು ಒರಗುವಾಗ, ಅವೆರಡನ್ನೂ ಆದರಿಸಲು ಬೇಕೇ ಬೇಕೆಂಬಂತೆ, ಬಲ ಕಂಕುಳಿನ ಅಡಿಯಿಂದ ಎದ್ದು ಬಂದು ಎಡ ಹೆಗಲನ್ನು ಹಾದು ಬೆನ್ನ

ಹಿಂದೆ ಮೊಣಗಂಟಿನ ವರೆಗೂ ಇಳಿದಿರುವ ಮಹಾ ಎಲ ವಸ್ತ್ರ! ಕೈಯಲ್ಲೊಂದು ಬೆಳ್ಳಿ ಕಟ್ಟಿರುವ ತೋರ ಬೆತ್ತ ಜಮೀನ್ದಾರರ ಇಂತಹ ಘನಗಂಭೀರ ಮೂರ್ತಿಯು ಇದಿರಾದೊಡನೆ 'ನಮಸ್ಕಾರ ರಾಯರೇ' ಎಂದು ಬಗ್ಗಿ ನಮಸ್ಕಾರ ಹೊಡೆದೆ. 'ಏನೋ! ಎಲ್ಲಿ ಹೊರಟೆ, ಮತ್ತೇನು ವಿಶೇಷ?' ಎಂದಾಯಿತು ರಾಯರ ಸಂಭಾವನೆ. ನಾನು ಕೊಟ್ಟದ್ದು ನಮಸ್ಕಾರ ಹೊರತು ಗೇಣಿಯಲ್ಲ-ಜಮೀನ್ದಾರರದನ್ನು ಹಿಂದೆ ಕೊಡದಿದ್ದುದು ಲೋಕರೂಢಿಗಿಂತ ವಿಶೇಷ ಆದರೇನು ಮಾಡಲಿ? ಹಾಗೆಂದು ಉತ್ತರ ಕೊಟ್ಟರೆ, ಆ ಉತ್ತರವೇ ವಿಶೇಷವಾದೀತೆಂದು ನೆನಸಿ 'ವಿಶೇಷ ವೇನೂ ಇಲ್ಲ ಸ್ವಾಮಿ!' ಎಂದೆ. 'ಸುಮಾರು ಗೇಣಿಯೆಲ್ಲಾ ಬಾಕಿಯುಂಟು ನೋಡು. ಏನು ಮಾಡುವದು — ಅವರ ಮನೆ ಬಾಗಿಲಿಗೆ ಹೋಗುವ ಕಾಲಬಂತು!" ಎಂದರು ರಾಯರು ಠೀವಿಯಿಂದ ನಗುತ್ತಾ. ನಾನು ಉತ್ತರವಾಗಿ ನಮ್ರಪೂರ್ವಕವಾಗಿ ನಕ್ಕು ಮತ್ತೊಮ್ಮೆ ಕೈಮುಗಿದು ಕಾಲ್ದೆಗೆದೆ. ಮತ್ತೂ ಸ್ವಲ್ಪ ಹೊತ್ತು ತಿರುಗಾಡಿದ ಮೇಲೆ ಅಂಗಡಿ ಬದಿಯಲ್ಲಿ ಮಾತಾಡಿ ನಿಂತಿದ್ದ ವಾಸು ಸಿಕ್ಕಿದ. ನಾನು ಹೋಗಿ ಬೆನ್ನು ತಟ್ಟಿ 'ಬಾ ಕಾಫಿ ಕುಡಿಯೋಣ' ಎಂದೆ. 'ಬೇಡ ಮಾರಾಯ! ಈಗ ಕುಡಿದೆ' ಎಂದ ವಾಸು. 'ಬಾರಯ್ಯ! ಈಗ ಕುಡಿದರೇನಾಯಿತು? ಇನ್ನೊಮ್ಮೆ ಕುಡಿಯೋಣ' ಎಂದು ಕೈಹಿಡಿದೆಳಕೊಂಡು ವಿಧಿವಿಲಾಸದ ಕಡೆಗೆ ಹೊರಟೆ. ವಾಸು ದಾಕ್ಷಿಣ್ಯಕ್ಕಾಗಿ ಬಂದ. 'ಇವ ಕಾಫಿ ಕುಡಿಯಲು ಹೋಗುವವ. ಹಾದಿಯಲ್ಲಿ ನನ್ನನ್ನು ಕಂಡವನಿಗೆ ಬಿಡಲಿಕ್ಕಾಗಲಿಲ್ಲ-ಅನಾವಶ್ಯಕ ಇವನ ದುಡ್ಡು ಖರ್ಚುಮಾಡಿಸಿದಂತಾಯಿತಲ್ಲಾ? ಎಂದು ನೆನಸಿಕೊಂಡ ವಾಸು. ತಿಂಡಿಗೆಲ್ಲಾ ನಾನೇ ಓರ್ಡರ್ ಕೊಟ್ಟೆ. ವಾಸು ಹೆಚ್ಚಿನವುಗಳನ್ನು ನಿರಾಕರಿಸಿ ಬೇಗ ಬೇಗನೆ ಚಾ ಕುಡಿದು ಮುಗಿಸಿ, ಪರ್ಸ್ ತೆಗೆದು ಇಬ್ಬರ ಹಣವನ್ನೂ ಕೊಟ್ಟು ತಿರುಗಿ ಬಂದು ಕುಳಿತುಕೊಂಡ. ಅವ ಬೇಗಬೇಗನೆ ಕುಡಿದುದರಿಂದ ನಿಧಾನವಾಗಿ ಕುಡಿದು ಹೊತ್ತು ತೆಗೆಯುವ ಆಗತ್ಯ ನನಗೆ ಬೀಳಲಿಲ್ಲ. ಅವನ ಅವಸರವನ್ನು ಕಂಡು 'ದುಡ್ಡು ನಾನು ಕೊಡುತ್ತೇನೆ. ವಾಸು'! ಎಂದು ಹೇಳುವಷ್ಟು ಹೇಳಿದೆ. ಹೊಟೆಲಿಗೆ ಕರಕೊಂಡು ಹೋದ ನನ್ನ ಸ್ನೇಹ ಭಾವಕ್ಕೆ ಪ್ರತಿಯಾಗಿ ಸ್ನೇಹಭಾವವನ್ನು ಈ ರೀತಿ ಪ್ರದರ್ಶಿಸಿದ. ಆ ಮೇಲೆ ಎರಡು ಸಿಗರೇಟುಗಳನ್ನೂ ತರಿಸಿಕೊಂಡ. ನಾವು ಹೊಗೆ ಬಿಡುತ್ತಾ ಕುಳಿತೆವು.

o o o o o o

'ಉಗ್ರಾಣಿ ಸೀನನ ಮಗುವೊಂದು ಹೋಗಿ ಬಿಟ್ಟಿತು. ಮನುಷ್ಯ ಸಂಸಾರದ ಅವಸ್ಥೆಯೇ ಬೇಡವಯ್ಯಾ!" ಹೋಟೆಲಿನ ಒಳಬಂದವರೊಬ್ಬರು ಭಟ್ಟರೊಡನೆ ಮುಖ ಕಿರಿದು ಮಾಡಿಕೊಂಡು ಹೇಳಿದರು. "ಯಾರು? ವೈಕುಂಠ ರಾಯರ ಉಗ್ರಾಣಿ ಸೀನ? ಯಾವುದು-ಸಣ್ಣ ಹುಡುಗಿಯೆ? ಆದುದೇನು?" ಎಂದು ಚಾ ಮಗಚುತ್ತಿದ್ದ ಭಟ್ಟರು ಆತುರದಿಂದ ಕೇಳಿದರು. "ಬೆಂಕಿ ಬಿದ್ದದ್ದು. ಅದನ್ನು ನೋಡಿದರೆ ನಮ್ಮ ಎದೆಯೆಲ್ಲಾ ಬೇಯುತ್ತದೆ! ಇಷ್ಟಿಷ್ಟು ದೊಡ್ಡ ಗುಳ್ಳೆಗಳು ಎದ್ದು ಹುಡುಗಿಯ ಕಣ್ಣು ಮುಖವೆಲ್ಲಾ ಬಾತು ಹೋಗಿತ್ತಯ್ಯ! 'ನನಗಲ್ಲ ಅವಳಿಗೆ'-ಆ ಬೊಕ್ಕೆಗಳೆಲ್ಲಾ ನೀರು ಓಡಿದಿದ್ದು ಹೆಣ ನೋಡಲಿಕ್ಕೆ ಸಾಧ್ಯವಿಲ್ಲ ನೋಡಿ!"

"ಓ ದೇವರೆ! ಬೆಂಕಿ ಹ್ಯಾಗೆ ತಾಗಿತಪ್ಪಾ. ಆಷ್ಟೂ ಹಿಡಿಯುವಾಗ ಯಾರೂ ಇರಲಿಲ್ಲವೆ?"

"ಯಾರು ಇರುವದು ಭಟ್ಟರೆ? ಯಮ ಬಂದು ಕರೆಯುವಾಗ ಯಾರೂ ಇಲ್ಲ ನೋಡಿ! ಇಲ್ಲವಾದರೆ ಆ ಸೀನ ಈ ಹೊತ್ತೆ ಮನೆಯಲ್ಲಿಲ್ಲದಿರಬೇಕೆ? ರಾಯರ ಹೆಂಡತಿಗೆ ತವರು ಮನೆಗೆ ಹೋಗಲು ನಿನ್ನೆಯೇ ದಿವಸ ಸಿಕ್ಕ ಬೇಕೆ? ಅದೇ-'ಮರಣಕ್ಕೆ ಮದ್ದಿಲ್ಲ' ಎನ್ನುವದು ಇದಕ್ಕೆ!"

ನಾವು ಅಲ್ಲಿಯೇ ಕುಳಿತಿದ್ದು ಈ ದುಃಖಕರ ವಾರ್ತೆಯನ್ನು ದಂಗುಬಡೆದು ಕೇಳುತ್ತಿದ್ದೆವು. ವಾಸು ಕೇಳಿದ: "ಮಗುವಿನ ಮೈಗೆ ಬೆಂಕಿ ಹೇಗೆ ತಗಲಿತು?" ಬಂದವರು ಕತೆಯನ್ನು ಆದಿಯಿಂದ ಹೇಳತೊಡಗಿದರು. "ನೋಡಿ, ನಮ್ಮ ವೈಕುಂಠರಾಯರದು ಗುರುತು ಉಂಟಲ್ಲ—ಅವರ ಉಗ್ರಾಣಿ ಈ ಸೀನ ಎಂದರೆ. ರಾಯರ ಹೆಂಡತಿಯ ಮನೆಯಲ್ಲಿ ಏನೋ ವಿಶೇಷವಂತೆ. ಅದಕ್ಕಾಗಿ ನಿನ್ನೆ ಅವರ ಹೆಂಡತಿಗೆ ತವರುಮನೆಯಿಂದ ಜನ ಬಂದಿತ್ತು. ರಾಯರ ನೆಂಟರ ಮನೆಗೆ ಇಲ್ಲಿಂದ ನಾಲ್ಕಾರು ಮೈಲು ಆಗುತ್ತದೆ. ಕಾಲು ದಾರಿಯಿಂದ ಹೋಗಬೇಕು. ಬಸ್ಸು ಗಿಸ್ಸು ಹೋಗುವದಿಲ್ಲ. ವೈಕುಂಠರಾಯರಿಗೆ, ಸುಮಾರು ಎಂಟೊಂಭತ್ತು ವರ್ಷವಾದೀತು ಒಬ್ಬ ಮಗನಿದ್ದಾನೆ. ಅವನನ್ನು ಕಲ್ಲುಮುಳ್ಳಿನಲ್ಲಿ ನಡೆಯಿಸಿಕೊಂಡು ಹೋಗುವುದು ಹೇಗೆ? ದೊಡ್ಡವರಲ್ಲವೆ? ನಮ್ಮ ಮಕ್ಕಳಾದರೆ ನಡೆದಾವೆನ್ನಿ. 'ಅವನನ್ನು ಹೆಗಲಲ್ಲಿಟ್ಟುಕೋ' ಎಂದು ಸೀನನನ್ನೂ ಅವರೊಟ್ಟಿಗೆ ವೈಕುಂಠರಾಯರು ಕಳುಹಿಸಿದ್ದರು. ಇಲ್ಲಿ ಸೀನನ ಹೆಂಡತಿ ಒಲೆ ಹಚ್ಚಿ ನೀರು ಕರಲು

ಹೋಗಿದ್ದಳು. ಮನೆಯಲ್ಲಿ ಅವಳ ಮೂರು ವರ್ಷದ ಹೆಣ್ಣುಮಗು, ಮತ್ತೊಂದು ಅದಕ್ಕಿಂತ ದೊಡ್ಡದು— ಏನು ಐದಾರು ವರ್ಷವಾದೀತು. ಎರಡೂ ಒಟ್ಟಿಗೆ ಒಲೆಯ ಪಕ್ಕದಲ್ಲಿ ಆಡುತ್ತಿದ್ದವು. ಸಣ್ಣ ಮಗುವಿನ ಅಂಗಿಗೆ ಬೆಂಕಿ ಹಿಡಿದು ಬಿಟ್ಟಿತು. ಆ ಸಣ್ಣ ಮಕ್ಕಳಿಗೆ ಏನು ಗೊತ್ತಾಗುತ್ತದೆ! ಬೊಬ್ಬೆ ಹೊಡೆದವು! ನೀರಿಗೆ ಹೋದ ಹೆಂಗುಸು ಓಡಿ ಬಂದಳು. ಅವಳು ಬರುವಾಗ ಅಂಗಿಗೆ ಹಿಡಿದ ಬೆಂಕಿ ಮೈತುಂಬಾ ಹಿಡಿದಾಗಿದೆ! ಒಟ್ಟಾರೆ ಕಾಲ ಬಂದಿದೆ ಅದಕ್ಕೆ! ಯಾರಾದರೂ ಗಂಡ ಸರಿರುತ್ತಿದ್ದರೆ ಕೂಡಲೇ ಮಗುವನ್ನು ಮಣ್ಣಿನಲ್ಲಿ ಹೊರಳಿಸುತ್ತಿದ್ದರು— ಮಗುವು ಬದುಕುತ್ತಿತ್ತೋ ಏನೋ! ಹೆಂಗಸರಿಗೆ ಅದೆಲ್ಲಾ ಗೊತ್ತುಂಟೆ? ಅವಳು ಬಂದವಳೇ ಗಲಿಬಿಲಿಗೊಂಡು ನೀರನ್ನು ಮೈಮೇಲೆ ಸುರಿದು ಬಿಟ್ಟಿದ್ದು. ಏನು ನೋಡುವದಯ್ಯ—ಆಗಲೇ ಇಷ್ಟಿಷ್ಟು ದೊಡ್ಡ ಗುಳ್ಳೆಗಳು! ಆ ಮೇಲೆ ಪಂಡಿತ ತಿಮ್ಮಾಚಾರ್ಯರು ಬಂದು ಔಷಧ ಹಚ್ಚಿದರು. ಏನು ಮಾಡಿದರೂ ಆಗ ಲಿಲ್ಲ. ಅರ್ಧ ಘಂಟೆಯೊಳಗೆ ಮಗು ಖಲಾಸ್! ಇದನ್ನು ಕೇಳಿದಾಗ ಆ ಸೀನನಿಗಿನ್ನು ಹೇಗೆ ಆದೀತು ಹೇಳಿ! ಅನ್ಯರ ಮಗುವನ್ನು ಎತ್ತಿಕೊಂಡು ಹೋದ ಬಡವ- ಹಿಂತಿರುಗಿ ಬರುವಾಗ ಮನೆಯಲ್ಲಿ ತನ್ನ ಮಗು ಬೆಂಕಿಗೆ ಬಿದ್ದು ಸತ್ತಿದೆ—ಅವ ಹೇಗೆ ತಡಕೊಳ್ಳಬೇಕು!"

೦ ೦ ೦ ೦

ನಾನು ಮತ್ತು ವಾಸು ಒಂದೊಂದು ನಿಟ್ಟುಸಿರು ಬಿಟ್ಟು ಹೊಟೆಲಿನಿಂದ ಹೊರಟೆವು. ದಾರಿಯುದ್ದಕ್ಕೂ ಇದನ್ನೇ ಮಾತಾಡುತ್ತಾ ಬಂದೆವು. ಅರ್ಧ ಹಾದಿಯಲ್ಲಿ ವೈಕುಂಠರಾಯರು ಹಿಂತಿರುಗಿ ಬರುವವರು ಸಿಕ್ಕಿದರು. ಬೆನ್ನ ಹಿಂದೆ ಏಳೆಂಟು ಜನರಿದ್ದು ರಾಯರು ಅವರೊಡನೆ ಗೌಜಿಯಿಂದ ಮಾತಾಡುತ್ತಾ ಬರುತ್ತಿದ್ದರು. ಅವರ ಅಟ್ಟಹಾಸವನ್ನು ಕಂಡು ನಮಗಾಶ್ಚರ್ಯವಾಯಿತು. 'ರಾಯರಿಗೆ ಚೀಲತುಂಬಾ ವಸೂಲಿಯಾಯಿತೆಂದು ಕಾಣುತ್ತದೆ. ಅಲ್ಲಿ ಆದ ಅನಾಹುತ ಪ್ರಾಯಶಃ ಗೊತ್ತಿಲ್ಲ' ಎಂದೆ ನಾನು. "ಏನು ವಿಟ್ಠಪ್ಪಾ! ಮತ್ತೇನು ವಿಶೇಷ?" ಎಂದರು ರಾಯರು ಹತ್ತಿರವಾದಾಗ ರಾಯರ ಅತ್ಯುತ್ಸಾಹವನ್ನು ಕಂಡು ನಾನು ಶಂಕಿಸುತ್ತಾ ಹೇಳಿದೆ "ಸೀನನ ಮಗುವಿನ........" ವೈಕುಂಠರಾಯರು ಒಡನೆಯೇ 'ಅದು ಆಯಿತಲ್ಲ ಹ್ಯಾಗೂ! ಮತ್ತೇನು ವಿಶೇಷ?' ಎಂದರು. ನಾನು ಮತ್ತು ವಾಸು ಒಬ್ಬರ ಮುಖವನ್ನೊಬ್ಬರು ನೋಡಿದೆವು.

ಅವರನ್ನು ದಾಟಿ ಬಂದ ಮೇಲೆ ವಾಸು ಉದ್ವೇಗ ತಡೆಯದೆ ಹೇಳಿದ "ಎಂಥಾ ಜನವಯ್ಯಾ ಅವ! ಇವನ ಒಂಭತ್ತು ವರ್ಷದ ಮಗು ನಡೆದು ಹೋಗುತ್ತಿದ್ದರೆ ಅದಕ್ಕೇನು ಭೂತ ಬಡಿಯುತ್ತಿತ್ತೆ? ಇಲ್ಲಿ ಆ ಬಡವನ ಮಗು ಬೆಂಕಿಗೆ ಬಿದ್ದು ಸತ್ತಿದೆಯಂತೆ-ಆ ನರ ರಾಕ್ಷಸ ಕೇಳುತ್ತಾನೆ 'ಅದಿರಲಿ. ಮತ್ತೇನು ವಿಶೇಷ?' ಇವನಿಗಿನ್ನು ವಿಶೇಷ ಯಾವುದಪ್ಪಾ ಲೋಕದಲ್ಲಿ! ಸೀನ, ಇವನ ಮಗುವನ್ನು ಹೊತ್ತುಕೊಂಡು ಹೋಗುವಾಗ ಕಾಲು ಜಾರಿ ಬಿದ್ದು ಮಗುವಿನ ತಲೆ ಬಂಡೆಗೆ ಬಡೆದು ಚೂರು ಚೂರಾಗಿ ಹೋಗುತ್ತಿದ್ದರೆ ಆಗ ವಿಶೇಷವಾಗುತ್ತಿತ್ತು ಈ ರಕ್ಕಸನಿಗೆ!

"ಅಷ್ಟೆಲ್ಲಾ ಬೇಡ. ಈ ವೈಕುಂಠರಾಯ 'ನನ್ನ ಮಗುವನ್ನು ಹೊತ್ತುಕೊಂಡು ಅಲ್ಲಿ ವರೆಗೆ ಹೋಗಿ ಬಾ' ಎನ್ನುವಾಗ 'ಇಲ್ಲ ಸ್ವಾಮಿ! ಇಲ್ಲಿ ನನ್ನ ಮಗುವು ಬೆಂಕಿಯ ಬಳಿಗೆ ಹೋಗುವಾಗ ನೋಡುವವರು ಯಾರೂ ಇಲ್ಲ!' ಎಂದು ಸೀನ ಹೇಳುತ್ತಿದ್ದರೆ ಅದೇ ವಿಶೇಷವಾಗುತ್ತಿತ್ತು!" ಎಂದೆ ನಾನು.

—ಸ್ವರಾಜ್ಯ ಸಾಧನೆಯಲ್ಲಿ—

# ಯುವಕರ ಸ್ಥಾನ ಹೇಗಿರಬೇಕು?

ಬರೆದವರು: ಶ್ರೀ. ಎಸ್. ಎಸ್. ಕಾರಂತರು

ಈಗಿನ ಪರಿಸ್ಥಿತಿಯಲ್ಲಿ ಕೊನೆಗೊಳಿಸಲು ಕಷ್ಟವಾದ ಹಾಗೂ ಬಹು ಪ್ರಾಮುಖ್ಯವಾದ ಪ್ರಶ್ನೆಯು ಯುವಕರದ್ದಾಗಿರುತ್ತದೆ. ಐಶ್ವರ್ಯವಂತರು, ಗಡ್ಡಹಣ್ಣಾದವರು ಇವರೇ ಮೊದಲಾದವರು ಜನಾಂಗದ ಸೂತ್ರಚಾಲನೆಯನ್ನು ನಡೆಸಿಕೊಂಡು ತಮ್ಮಿಚ್ಛಾನುಸಾರ ನಡೆಯುವ ಕಾಲವು ಬಹಳ ಹಿಂದುಳಿಯಿತು. ಅದು ನಮ್ಮ ಕಾಲವಲ್ಲ. ಅದಿಂದಿಗೆ ತೀರಿ ಹೋಗಿರುವುದು. ಇಂದಿನ ಜನಾಂಗದ, ಅಲ್ಲ ಎಲ್ಲಾ ಜನಾಂಗಗಳ ಸುಸಂಘಟಿತ ಸಂಘಗಳ ಉದ್ದಿಶ್ಯವು ಏನೆಂದರೆ "ಯುವಕರ ಮನವನ್ನು ತಮ್ಮೆಡೆಗೆ ಒಲಿಸಿಕೊಳ್ಳುವುದು" ಇದು ಏಕೆ? ಯುವಕರಿಂದ ತಾನೇ ಏನಾಗುವುದು ಎಂದು ಕೆಲ ಹಳಬರ ವಾದವಿರಬಹುದು. ಹಳಬರೇ! ನಿಮ್ಮಿಂದ ಈಗ ಏನೂ ಸಾಗಲಾರದು. ಧನಾಢ್ಯರೇ! ನಿಮ್ಮಿಂದಲೂ ಸಾಧ್ಯವಾಗಲಾರದೆಂಬುದನ್ನು ಸರಿಯಾಗಿ ಮನಗಂಡಿರಿ. ಇಂದಿನ ಯುವಕರು ನಿಮ್ಮ ಐಶ್ವರ್ಯವನ್ನೂ ಪರಿಗಣಿಸರು ಎಂಬದನ್ನು ಚೆನ್ನಾಗಿ ತಿಳಿದಿರಿ.

೧೯೩೦ರಲ್ಲಿ ನಡೆದ ಸತ್ಯಾಗ್ರಹ ಚಳವಳದ ನೆನಪಿದೆಯೇ ನಿಮಗೆ? ಆಗ ಎಷ್ಟು ಜನ ಧನಾಢ್ಯರು ಕಾರಾಗೃಹವನ್ನು ಸೇರಿದರು? ಎಷ್ಟು ಜನ ಹಳಬರು ಲಾಠಿಯ ಏಟಿಗೆ ಗುರಿಯಾದರು; ಎಷ್ಟು ಯುವಕರು ತಮ್ಮ ದುಡಿತವನ್ನು ಬಿಟ್ಟು ರಾಷ್ಟ್ರೋದ್ಧಾರಕ್ಕಾಗಿ ಹೋರಾಡಿದರೆಂಬುದನ್ನು ಅರಿತಿರುವಿರೇ? ಅದರ ಅಂಕೆ ಸಂಖ್ಯೆಗಳಿವೆಯೇ ನಿಮ್ಮಲ್ಲಿ? ಅಂದಿನಾದಿನದಲ್ಲಿ ಅದೆಷ್ಟು ಜನ ಧನಾಢ್ಯರು ದೇಶದ್ರೋಹಿಗಳಾಗಿರುವರೆಂಬುದನ್ನು ಮರೆಯಲಿಲ್ಲವಷ್ಟೇ? ಪ್ರಪಂಚದ ಎಲ್ಲೆಡೆಗಳಲ್ಲಿರುವ "ಕಮ್ಯೂನಿಸ್ಟ್ ಪಾರ್ಟಿ"ಯೆಂಬ ಸಂಘದವರು ಹಳಬರಿಂದ ಯಾವ ಸಹಾಯವನ್ನೂ ಕೋರುವುದಿಲ್ಲ. ಬದಲಾಗಿ ಯುವಕರನ್ನು ತಮ್ಮ ಸಂಘಕ್ಕೆ ಸೇರಿಸಿಕೊಳ್ಳಲು ವಿಶ್ವಪ್ರಯತ್ನವನ್ನು ನಡಿಸುತ್ತಿರುವರು. ಕೇವಲ ಹತ್ತು ವರುಷಗಳ ಕೆಳಗೆ ಯಾವುದಾದರೊಂದು ಪ್ರಸಂಗವನ್ನು ಹಿಡಿದು ಶಾಲೆಗೆ ಹೋಗುವ ಹುಡುಗರು ಮಾತಾಡ ಹತ್ತಿದರೆ ಮುದುಕರು, ಪ್ರಾಯಸಂದವರು, ನಾಲ್ವತ್ತು ವರುಷಗಳ ಮೇಲಿನವರು ಏನನ್ನುತ್ತಿದ್ದರು? "ನಿನಗ್ಯಾಕೋ, ಶಾಲೆಗೆ ಹೋಗುವುದು, ಪಾಠ ಕಲಿಯುವುದು, ಇವೇ ಮೊದಲಾದುವನ್ನು ಬಿಟ್ಟು ರಾಜಕೀಯ ವಿಷಯದ ಪಂಚಾತಿಕೆ." ಎಂದು ಯುನಿವರ್ಸಿಟಿಯ ವಿದ್ಯಾರ್ಥಿಗಳಾದರೆ ಸಸ್ಪೆಂಡ್ ಮಾಡುವೆವೆಂದು ಗದರಿಸುವ ಪ್ರಸಂಗವಿತ್ತು. ಯಾವುದಾದರೊಂದು ಫ್ಯಾಕ್ಟರಿಯಲ್ಲಿ ಕೆಲಸ ಮಾಡುವವನಾದರೆ ಡಿಸ್ಮಿಸಿನ ಭಯವನ್ನು ತೋರುವುದೂ ಇತ್ತು. ಆದರೆ ಇಂದಿಲ್ಲ; ಇಂದೇಕೆ ಅದು ಮಾಯವಾಗಿರುವದೆಂಬುದನ್ನು ಅರಿತಿರುವಿರಾ ನೀವು?

ಯುವಕರು ಕೆಲವೊಂದೆಡೆಗಳಲ್ಲಿ ಹಲವೊಂದು ವೇಳೆ ಈಗಿನ ಪರಿಸ್ಥಿತಿಯಲ್ಲಿ ಮುಂದುವರಿಯದಿರಬಹುದು. ಈಗ ಎಲ್ಲೆಡೆಗಳಲ್ಲಿ ತಾಂಡವವಾಡುವ ಆರ್ಥಿಕ ಮುಗ್ಗಟ್ಟು ಇದಕ್ಕೆ ಕಾರಣವಾಗಿರುವುದು. ಇಲ್ಲವೇ ಹಣದ ಅಭಾವವಿರಬಹುದು. ಇವುಗಳೆಡೆಯಲ್ಲಿ ಅವರ ನಿಜತ್ವವು ತಾನೇ ಹೊರಬೀಳುವುದು ಹೇಗೆ. ಮುತ್ತನ್ನು ಒಂದಕ್ಕೊಂದಕ್ಕೆ ತಾಗಿ ಹಾಳಾಗದಂತೆ ಗಂಧದಿಂದ ಲೇಪಿಸುವುದುಂಟು. ಈ ಲೇಪವನ್ನು ತೆಗೆದರೆ ಮಾತ್ರ ಅದರ ಕಾಂತಿಯು ಗೋಚರಿಸುವಂತೆ ಇದೆ ಇಂದಿನ ಹಲಕೆಲವು ಯುವಕರ ಸ್ಥಿತಿ. ಆದರೆ ಈ ಮೇಲೆ ಹೇಳಿದ ಬಂಧನಗಳನ್ನು ಹರಿದೊಗೆಯಲು ನಿಜವಾದ ಯುವಕನು ಹೆಣಗಾಡುತ್ತಿರುವನು. ಅಹೋರಾತ್ರಿ ಹೋರಾಡುತ್ತಿರುವನು. ಇನ್ನು ಸ್ವಲ್ಪ ಸಮಯದಲ್ಲೇ ಅದು ಶಿಥಿಲವಾಗದಿರದು. ಅದು ನಿರ್ನಾಮವಾಯಿತೆಂದರೆ ಯುವಕನಿಗೆ ಬೇರಾವುದನ್ನು ಮಾಡುವುದಕ್ಕೂ ಆತಂಕವಿರುವುದಿಲ್ಲ. ಹೀಗೆ ತನ್ನ ಬಂಧನವನ್ನು ಹರಿದೊಗೆದು ಬಂದು ನೋಡಿದರೆ ಅವನಿಗೆ ಕಮ್ಯೂನಿಸ್ಟರು ಸ್ವಾಗತವನ್ನೀಯುವರು. ಕಮ್ಯೂನಿಸ್ಟರೆಂದರೆ ಎಲ್ಲವೂ ಹೊಸತಾಗಬೇಕೆನ್ನುವವರು. ತಮ್ಮಿಂದಾದಷ್ಟು ಸಾಹಸಪಟ್ಟು ಯುವಕರ ಸಂಘಟನೆಯನ್ನು ಮಾಡಲು ಟೊಂಕಕಟ್ಟಿರುವರು. ಹತ್ತು ವರುಷಗಳ ಕೆಳಗೆ ಮುಖಂಡರು ನೀನು ಶಾಲೆಗೆ ಹೋಗುವವ; ನೀನು ವಿವಾ

ಹಿತೆ; ನೀನು ವಿಧವೆ, ಎಂದು ಯಾರನ್ನು ತಮ್ಮ ಬದಿಗೆ ಸೆಳೆದುಕೊಳ್ಳಲಿಲ್ಲವೋ; ಯಾರಿಗೆ ಮಾತನಾಡಲೂ ಆಸ್ಪದವನ್ನೀಯಲಿಲ್ಲವೋ, ಅಂಥವರು ಇಂದು ತಂಡ ತಂಡವಾಗಿ ಕಮ್ಯೂನಿಸ್ಟ್ ಪಾರ್ಟಿಗೆ ಸೇರುವರು. ಇನ್ನು ಜನಾಂಗ ಜನಾಂಗಗಳೊಳಗೆ ಯುದ್ಧವು ಸಂಭವಿಸಬಹುದಾದರೆ ಅದು ಯುವಕರಿಂದ ಹೋರಾಡಲ್ಪಡುವುದೇ ವಿನಹ ಮುದುಕರಿಂದಲ್ಲ. ಚೀನಾ ಜಾಪಾನು ಯುದ್ಧಗಳೆಡೆಗೆ ಸ್ವಲ್ಪ ಕಣ್ಣಿಟ್ಟು ನೋಡಿರಿ. ಯಾವ ತಂಡದಲ್ಲಿ ಯುವಕರ ಹೆಚ್ಚಳವಿರುವುದೋ, ಅದಕ್ಕೆ ಜಯಲಕ್ಷ್ಮಿಯೂ ಒಲಿಯುವಳು.

ನ್ಯಾಯದೃಷ್ಟಿಯಿಂದ ನೋಡುವುದಾದರೆ ಹೇಗೆ ಒಂದು ಜನಾಂಗದ ಏಳಿಗೆಗೆ ಹಳಬರ ಸಹಾಯವು ಬೇಕೋ ಅಂತೆಯೇ ಯುವಕರ ಸಹಾಯವೂ ಅವಶ್ಯವಿರುವುದು. ಇಂದು ನಮಗೆ ಬಂದೊದಗಿರುವ ಪ್ರಾಮುಖ್ಯ ಪ್ರಶ್ನೆಯೆಂದರೆ ಸ್ವರಾಜ್ಯ ಸಾಧನೆ. ಇದರಲ್ಲಿ ನಾವು ಖಂಡಿತವಾಗಿಯೂ ಇಲ್ಲ. ಮಹಾತ್ಮಾ ಗಾಂಧಿಯವರು ಅದಕ್ಕಾಗಿಯೇ "ಅಹಿಂಸೆ"ಯ ಶಸ್ತ್ರವನ್ನು ಹೂಡಿರುವುದು. ಇದನ್ನೂ ನಡಿಸಿಕೊಂಡು ಹೋಗಲು ಹಳಬರ ನಾಯಕತ್ವವೇ ಬೇಕಾಗಿಲ್ಲ. ಹಳಬರಾದ ಮಾತ್ರಕ್ಕೆ ಅವರು ಸರ್ವಜ್ಞರಾಗಿ ಹೋಗಿಲ್ಲ. ಧನಾಢ್ಯನಂತೆಯೇ ಬಡವನಿಗೂ ಇದರಲ್ಲಿ ಸ್ಥಾನವಿದೆ; ವಿಶ್ವವಿದ್ಯಾನಿಲಯದ ಮೆಟ್ಟಲನ್ನು ಹತ್ತಿಳಿದ "ವಿದ್ವಾಂಸ"ರಂತೆಯೇ ಕೂಲಿಯವನಿಗೂ ಇದರಲ್ಲಿ ಸ್ವಾರ್ಥವಿದೆ; ಗಂಡಸರಂತೆ ಹೆಂಗಸರಿಗೂ ಇದು ಬೇಕಾಗಿದೆ. ಆದರೆ ಹಳಬರಿಗೆ ಹೊಸ ಶಕ್ತಿಯುಕ್ತಿಗಳು ಬರುವುದು ಕಡಿಮೆ. ಎಷ್ಟಾದರೂ ಹಳಬರಲ್ಲವೇ? ಅವರಿಗೆ ತೋರಿದ್ದೇ ತೋರುವುದು ನ್ಯಾಯ. ಆದರೆ ಇಂದಿನ ವಾತಾವರಣದಲ್ಲಿ ತೋರಿದ್ದು ತೋರಿ ಪ್ರಯೋಜನವಿಲ್ಲ. ತೋರದ್ದನ್ನು ನೋಡಬೇಕು. ಅದನ್ನು ನೋಡಲಿಕ್ಕೆ ಯುವಕರಿಂದಲ್ಲದೆ ಹಳಬರಿಂದ ಸಾಧ್ಯವಾಗದು. ಆದುದರಿಂದ ಯುವಕರು ಈಗಿನಿಂದಲೇ ಮುಂದಿನ ಕಾರ್ಯಕ್ರಮಗಳನ್ನು ತಾವು ವಹಿಸಿಕೊಂಡು ಕಾರ್ಯವನ್ನು ಸುಸೂತ್ರವಾಗುವಂತೆ ಸೂತ್ರಚಾಲನೆಯನ್ನು ಮಾಡುವದನ್ನು ಕಲಿಯತಕ್ಕದ್ದು. ಇದರಿಂದ ಬಹು ದೊಡ್ಡ ಸಮಸ್ಯೆಯೊಂದು ಬಿಡಿಸಿದಂತಾಗುವುದು. ಅದಾವುದೆಂದರೆ "ಸತ್ಯವು ರಾಜ್ಯಭಾರವನ್ನು ಮಾಡಲು ಸಮರ್ಥವೋ ಅಥವಾ ಸರ್ವಾಧಿಕಾರಿತ್ವವು ಮಾತ್ರ ಸಮರ್ಥವೋ" ಎಂದು.

'ಸರ್ವ ಸಮತೆ, ಮತ್ತು ನಿಷ್ಪಕ್ಷಪಾತ' ಇವುಗಳೆರಡು ಯುವಕರನ್ನೂ, ಅವರ ಹೃದಯವನ್ನೂ ಚೆನ್ನಾಗಿ ನಾಟಿರುವವು. ಸರ್ವಸಮತೆ ಮತ್ತು ನಿಷ್ಪಕ್ಷಪಾತದ ದೆಸೆಯಿಂದಾಗಿ ಅವರಿಗೆ 'ಇನ್ನೇನು' ಎಂಬ ಪ್ರಶ್ನೆಗೆ ಉತ್ತರವು ದೊರೆತಿರುವುದು. ಅವರು ಮುಂದಿನ ಪಥವನ್ನು ಚೆನ್ನಾಗಿ ಅರಿತಿರುವರು. ಹಾಗೂ ಅದನ್ನು ಪೂರ್ಣಗೊಳಿಸಲು ಅವರ ಬಿಸಿರಕ್ತವು ತಯಾರಿರುವುದು. ಅವರು ಈ ಸೃಷ್ಟಿಯಂತೆ ಹೊಸತೊಂದು ಸೃಷ್ಟಿಯನ್ನು ರಚಿಸಲೂ ತಯಾರಿರುವರು. ದೈವದ್ರೋಹಿಗಳನ್ನು ಸದೆಬಡೆದು ಜನತೆಯನ್ನು ಉದ್ಧರಿಸಿ ಪ್ರಜಾಸತ್ತಾತ್ಮಕ ರಾಜ್ಯಭಾರಕ್ಕೂ ಜನಜೀವನಕ್ಕೂ ಇರುವ ದ್ವೇಷವನ್ನು ಹರಿದೊಗೆಯಲೂ ತಮ್ಮ ಪ್ರಾಣವನ್ನರ್ಪಿಸಲೂ ತಯಾರಿರುವರು.

ಸರ್ವಸಮತೆ ಮತ್ತು ನಿಷ್ಪಕ್ಷಪಾತದ ಕಡೆಗೆ ಯುವಕರು ತಮ್ಮ ಮನಸ್ಸನ್ನು ತಿರುಗಿಸಿರುವುದು ಬಹಳ ಸ್ತುತ್ಯವಾದ ವಿಷಯ; ಏಕೆಂದರೆ ಪ್ರತಿಯೊಬ್ಬ ಯುವಕನ ಹೃದಯದಲ್ಲೂ ಮನಸ್ಸಿನಲ್ಲೂ ಈಗ ಪ್ರಾಮುಖ್ಯವಾಗಿ ನೆಲೆಸಿರುವ ಪ್ರಶ್ನೆಯು ಅದೇ.

ನ್ಯಾಯ ಪಕ್ಷಪಾತಿಯಾದ ಯಾವಾತನಿಗಾಗಲೀ ಯಾವ ಸಂಸ್ಥೆಯಾಗಲೀ ಯುವಕರ ಮನಸ್ಸನ್ನು ಒಲಿಸಿಕೊಳ್ಳುವ ಪ್ರಶ್ನೆಯು ಬಹಳ ಸುಲಭದ್ದಿರುವುದು. ಯಾಕೆಂದರೆ ಇಂದಿನ ಯುವಕ ಯುವಕಿಯರು ನ್ಯಾಯ ಬಾಹಿರರಲ್ಲ. ಸುಶಿಕ್ಷಿತರಿದ್ದು ನ್ಯಾಯಕ್ಕೆ ತಲೆಯೊಡ್ಡುವವರೇ. ಸುಶಿಕ್ಷಿತರೆಂದ ಮಾತ್ರಕ್ಕೆ ನ್ಯಾಯವಾದಿಗಳೆಂಬುದು ಅವರ ವಾದವಲ್ಲ. ಈ ಹಿಂದಿನ ಅನುಭವದಿಂದಲೂ ಅವರಿಗೆ ಹಳಬರು ತೋರಿಸಿದ ಅನ್ಯಾಯದಿಂದಲೂ ಶಿಕ್ಷಣದ ಪ್ರಭಾವದಿಂದಲೂ ಅವರು ನ್ಯಾಯವನ್ನು ಕಲಿತಿರುವರು. ಪೆಟ್ಟುಕೊಟ್ಟರೆ ನೋವಾಗುವಂತೆ ಅವರಿಗೆ ಅನ್ಯಾಯವನ್ನೂ ಪಕ್ಷಪಾತವನ್ನೂ ಹಳಿಯವರು ತೋರಿದ್ದರಿಂದ ಅವರು ನ್ಯಾಯ ಮತ್ತು ಸರ್ವಸಮತೆಯ ದಾರಿ ಹಿಡಿದರು.

ಸಾಂಪ್ರದಾಯ ಹಾಗೂ ಮತಾಚಾರವನ್ನು ಇಂದಿನ ಯುವಕ ಯುವಕಿಯರು ಬಿಟ್ಟಿರುವದರಿಂದ ಅವರು ಯಾವ ಸ್ಥಾನಮಾನಕ್ಕೂ ಅರ್ಹರಲ್ಲವೆಂದು ಕೆಲ ಹಳಬರ ವಾದವಿದೆ. ಆದರೆ ಇಂದಿನ ಯುವಕ ಯುವಕಿಯರಿಗೆ ನ್ಯಾಯವೇ ಸಾಂಪ್ರದಾಯ ಸರ್ವಸಮತೆಯೇ ಮತಾಚಾರ. ಇದು ತಪ್ಪೆಂದು ಹೇಳುವ ತಿಳಿಗೇಡಿಗಳ ಹಂಗು ಅವರಿಗಿಂದು ಬೇಡ.

ಮುಂದೆ ಬರುವುದು ಖಂಡಿತವಾಗಿಯೂ ಯುವಕರ ಕಾಲ. ನಿಜವಾಗಿಯೂ ಅಂದು ನಾವು ನ್ಯಾಯ, ನೀತಿ ವಿಶ್ವಪ್ರೇಮ, ಸರ್ವಸಮತೆಗಳನ್ನು ನೋಡಬಹುದು. ಅವುಗಳನ್ನು ಅನುಭವಿಸಲೂ ಬಹುದು. ಈ ಹಿಂದೆ ಪಕ್ಷಪಾತ, ಜಾತಿಭೇಧ ಇವುಗಳೆನ್ನೆಲ್ಲ ತೋರಿದ ಹಳಬರನ್ನು ಅಂದು ಅವರು ಕ್ಷಮಿಸದಿರಲಾರರು. ಯುವಕರು ಇಂದಿನ ಮುಖಂಡರೊಂದಿಗೆ ಬೇರೇನನ್ನೂ ಯಾಚಿಸುವುದಿಲ್ಲ. ಬೇರಾವುದನ್ನೂ ಬೇಡುವದಿಲ್ಲ. ಆದರೆ ನ್ಯಾಯ, ಸರ್ವಸಮತೆ ನಿಷ್ಪಕ್ಷಪಾತವನ್ನು ಮಾತ್ರ ಬೇಡುತ್ತಿಗುವರು, ಅದು ಎಂದಿನ ವರೆಗೆ ನಿರಾಕರಿಸಲ್ಪಡುವುದೋ ಅಂದಿನ ವರೆಗೆ ಸುಖ ಶಾಂತಿ ನೆಮ್ಮದಿಗಳಿಲ್ಲ.

ಯುವಕರೇ, ನಮಗೆ ಭವ್ಯವಾದ ಭವಿಷ್ಯವಿರುವುದು. ಕಾಲಚಕ್ರವು ತಿರುಗುವುದು. ಎಷ್ಟೋ ರಾಜ್ಯಗಳು, ಎಷ್ಟೋ ಮಹಾಪುರುಷರು ಉದಯಿಸಿ ಅಳಿದುಹೋಗುವರು. ಇಂದು ಅತ್ತೆಯ ಕಾಲವಿರಬಹುದು. ಆದರೆ ನಾಳೆ ಅತ್ತೆ ಸತ್ತ ಮೇಲೆ ಸೊಸೆಯ ಕಾಲ ಬರುವುದುಂಟಷ್ಟೆ. ಆಗ ಮಾತ್ರ ನೀವು ನಿಮ್ಮ ಸೊಸೆಯನ್ನು ಚೆನ್ನಾಗಿ ನೋಡಿರಿ.

# ವಿನೋದಮಯ





# ರಾಜತಂತ್ರ

## ಮಾತಿನಿಂದ ಸ್ವರಾಜ್ಯ!

ಭಾರತಕ್ಕೆ ಸ್ವರಾಜ್ಯ ಸಾಧನೆಯಾಗಲು ಧುರೀಣರು ಹಲವಾರು ವಿಧಾನಗಳನ್ನು ತೋರಿಸಿ ಕೊಟ್ಟಿದ್ದಾರೆ. ಸ್ವಲ್ಪ ಸಮಯದ ಹಿಂದೆ ಶ್ರೀ. ಭೂಲಾಭಾಯಿ ದೇಸಾಯಿಯವರು ಇಂಗ್ಲೆಂಡಿಗೆ ತೆರಳಿದ್ದಾಗ ಅವರು ಭಾರತಕ್ಕಾಗಿ ತುಂಬಾ ಪ್ರಚಾರ ಮಾಡಿದ್ದಾರೆ. ಆರೋಗ್ಯವನ್ನು ಸುಧಾರಿಸುವುದಕ್ಕಾಗಿ ಹೋಗಿದ್ದರೂ ಅನೇಕ ಮಂದಿ ಪ್ರಮುಖ ರಾಜಕೀಯ ಧುರೀಣರನ್ನು ಕಂಡು ಫೆಡರೇಶನಿನ ಯೋಜನೆಯಲ್ಲಿ ಬದಲಾವಣೆಗಳನ್ನು ತಂದೊಡ್ಡದಿದ್ದರೆ ರಾಷ್ಟ್ರೀಯ ಬಿಕ್ಕಟ್ಟನ್ನು ತಂದೊಡ್ಡುವೆವೆಂದು ಸಾಮ್ರಾಜ್ಯಶಾಹೀ ಮನೋವೃತ್ತಿಯ ಬ್ರಿಟಿಷ್ ಮಂತ್ರಿಮಂಡಲದ ಕಿವಿಯ ಬಳಿ ಇದನ್ನುಸಿರಿದ್ದರು. ಕುಯುಕ್ತಿಯಲ್ಲಿ ಅಗ್ರಗಣ್ಯರೆನಿಸಿದ ಬ್ರಿಟಿಷರು ಈ ಮಾತಿನ ಸುರಿಮಳೆಯನ್ನು ವಿಶೇಷವಾಗಿ ಲಕ್ಷಿಸಲಿಲ್ಲ.

ಮಾತಿನ. ಬೆದರಿಕೆಗಳಿಂದ ಕಾರ್ಯ ಸಾಧಿಸುವ ವಿಧಾನವನ್ನು ಜಗತ್ತಿಗೆ ಕಲಿಸಿಕೊಟ್ಟ ಸೀನರ್ ಮುಸ್ಸೋಲಿನಿಯು ಲೋಕದ ಪ್ರಶಂಸೆಗೆ ಪಾತ್ರವಾಗಿದ್ದಾನೆ. ಇಟಲಿಯ ಸರ್ವಾಧಿಕಾರಿಯು ಕೇವಲ ಪರಿಶುದ್ಧವಾದ ಪೊಳ್ಳುಮಾತುಗಳಿಂದ ಎಬಿಸೀನಿಯವನ್ನು ನುಂಗಿರುತ್ತಾನೆ. ಅದೇ ರೀತಿಯಲ್ಲಿ ಒಂದರ ಬಳಿಕಿನ್ನೊಂದು ಬೆದರಿಕೆಯು ತೋರಿಸಿದರೆ ಸ್ವರಾಜ್ಯ ಸಾಪ್ರಿಪ್ತಿಯಾಗುವುದೆಂಬ ವಿಶ್ವಾಸವು ನಮ್ಮ ಧುರೀಣರಲ್ಲಿ ದಿನಹೋದಂತೆ ಬಲವಾಗುತ್ತಾ ಬರುತ್ತಿದೆಯೆಂದು ಕಾಣುತ್ತದೆ. ಸರಿ. ಹೆದರಿಸಿಯೇ ಸ್ವರಾಜ್ಯಗಳಿಸಲು ಸಾಧ್ಯವಿದ್ದರೆ ಅದೇಕೆ ನಾವು ಸುಮ್ಮನಿರಬೇಕು?

* * *

## ಸ್ವರಾಜ್ಯಪ್ರಾಪ್ತಿಯ ಕಾಲನಿರ್ಣಯ!

"ಒಂದೇ ವರುಷದಲ್ಲಿ ಸ್ವರಾಜ್ಯ" ವೆಂಬ ಆ ಸವಿನುಡಿಯು ಕೆಲವು ವರುಷಗಳ ಹಿಂದೆ ಕೋಟ್ಯಂತರ ಜನರ ಬಾಯಿಯಿಂದ ಹೊರಹೊರಟಿತು. ಅಂತಹ ನುಡಿಗಳು ಇನ್ನೂ ಮುಗಿಯಲಿಲ್ಲ. "ಐದೇ ವರುಷಗಳಲ್ಲಿ ಸ್ವರಾಜ್ಯ" ಸಾಧನೆಯಾಗುವುದೆಂದು ಆಶ್ವಾಸನೆಯನ್ನು ಕೊಟ್ಟಿರುವ ಶ್ರೀ. ಭೂಲಾಭಾಯಿಯವರು ಭಾರತೀಯರ ಕೃತಜ್ಞತೆಗೆ ಅರ್ಹರಾಗಿದ್ದಾರೆ. ಶ್ರೀ. ಸತ್ಯಮೂರ್ತಿಯವರು ಐದೇ ವರುಷಗಳಲ್ಲಿ ಮತದಾನ ಪೆಟ್ಟಿಗೆಯ ಮುಖಾಂತರವೇ ಸ್ವರಾಜ್ಯವನ್ನು ಗಳಿಸಲು ಬದ್ಧಕಂಕಣರಾಗಿರುತ್ತಾರೆ. ಸಮತಾವಾದಿಗಳು ಬಂಡವಲಗಾರರನ್ನೇ 'ಶೋಷಣೆ' ಮಾಡಿ ದೇಶಕ್ಕೆ ಆರ್ಥಿಕ ಸ್ವಾತಂತ್ರ್ಯವನ್ನು ಕೊಡುವುದರಲ್ಲಿದ್ದಾರೆ. ಶಾಂತಪಕ್ಷದವರು ಬ್ರಿಟಿಷ್ ಸಾಮ್ರಾಜ್ಯಶಾಹಿಯೊಡನೆ ಮಾಡಿಕೊಂಡ ನಿವೇದನೆಯು ಮನ್ನಿಸಲ್ಪಡುವುದೇ ತಡ-ಭಾರತಕ್ಕೆ ಸ್ವರಾಜ್ಯ ಪ್ರಾಪ್ತಿಯಾದಂತೆ. ಅಲ್ಪಸಂಖ್ಯಾತರಿಗೆ ವಿಶೇಷಾಧಿಕಾರಗಳನ್ನು ಕಾಂಗ್ರೆಸು ಕೊಡಲೊಪ್ಪಿತೆಂದೊಡನೆಯೇ ಮಿ| ಜಿನ್ನರು ಕೂಡಲೆ ಸ್ವಾತಂತ್ರ್ಯವನ್ನು ದೊರಕಿಸಿಕೊಡುತ್ತಾರೆ! ಪ್ರತಿಯೊಬ್ಬ ಯುವಕನೂ "ರೈಫಲ್" ಅಭ್ಯಾಸ ಪಡೆದರೆ ಸಾಕು; ಶ್ರೀ. ಸಾವರ್ಕರರು ಸ್ವರಾಜ್ಯವನ್ನು ಸಂಸ್ಥಾಪಿಸಿ ಬಿಡುತ್ತಾರೆ. ಹೀಗೆ ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಸ್ವರಾಜ್ಯವನ್ನು ದೊರಕಿಸಿಕೊಡಲಿದ್ದಾರೆ, ಆಗಲಪ್ಪಾ ಹೇಗಾದರೂ ಸ್ವರಾಜ್ಯಪ್ರಾಪ್ತಿಯಾಗಲಿ.

* * *

## ಅಂತರ್ ರಾಷ್ಟ್ರೀಯ ಸಂಬಂಧ ಬೇಕೇ?

ಪಂಡಿತ ನೆಹರುಗಳು ಸ್ಪೈನಿನ ಯುದ್ಧರಂಗಕ್ಕೆ ಹೋದರು. ಸ್ಪೈನಿನ ರಿಪಬ್ಲಿಕ್ ಅವರಿಗೆ ಸ್ವಾಗತವನ್ನಿತ್ತಿತು. ಇದರಿಂದ ಸ್ಪೈನಿನ ಜನರಿಗಾವ ಉಪಕಾರವಾಯಿತು? ಭಾರತವು ಜನರಲ್ ಫ್ರೇಂಕೊನಿಗೆ ವಿರೋಧವಾಗಿ ಹೋರಾಡುವುದೆ? ಇಲ್ಲ. ಅದು ಕೇವಲ ಸಹಾನುಭೂತಿಯನ್ನು ವ್ಯಕ್ತಪಡಿಸುವ ಸಂದರ್ಶನೆಯಾಗಿತ್ತು. ಪಂಡಿತ ನೆಹರುಗಳ ಯುರೋಪು ಸಂಚಾರದ ಮೂಲಕಾರಣವೆಂದರೆ ಆಂತರ್‌ರಾಷ್ಟ್ರೀಯ ರಾಜನೀತಿಯ ಪರಿಚಯಕ್ಕಾಗಿ. ಭಾರತ ರಾಷ್ಟ್ರೀಯ ಸಮಸ್ಯೆಯನ್ನು ಅಂತರ್‌ರಾಷ್ಟ್ರೀಯ ಪರಿಸ್ಥಿತಿಯೊಡನೆ ಹೋಲಿಸಿ ಅದಕ್ಕೆ ಹೊಸ ರೂಪವನ್ನು ಕೊಡುವ ಇಚ್ಛೆ ಅವರಲ್ಲಿರಬಹುದು. ಆದರೆ ಮಹಾತ್ಮಾಜಿಯವರು ಅಂತಹ ವ್ಯತ್ಯಾಸವನ್ನು ತಂದೊಡ್ಡಲು ಎಡೆಗೊಡುವರೆ? ಪಂಡಿತ ನೆಹರುಗಳು ಮಹಾತ್ಮಾಜಿಯರ ವಚನವನ್ನು ಮೀರುವರೆ? ಇಲ್ಲ.

ಯುರೋಪಿಗೆ ತೆರಳದೆ ಅಂತರ್ ರಾಷ್ಟ್ರೀಯ ಪರಿಸ್ಥಿತಿಯ ಪರಿಚಯ ಮಾಡಿಕೊಳ್ಳದೆ ತನಗೆ ಬೇಕಾದುದನ್ನು ಬ್ರಿಟಿಷ್ ಸರಕಾರದಿಂದ ಪಡೆಯುವೆನೆಂಬ ಧೈರ್ಯವು ಅವರಲ್ಲಿದೆ. ಭೂಲಾಭಾಯಿಯವರು ಇಂಗ್ಲೆಂಡಿನಲ್ಲಿ ಮಾಡಿದ ಭಾಷಣಗಳೂ ಗಾಂಧಿಜಿಯವರ ಸೂಚನೆಗಳಿಗನುಸಾರವಾಗಿರಬೇಕು. ಒಟ್ಟಿನ ಮೇಲೆ ಹೇಳುವುದಿದ್ದರೆ ಅಂತರ್ ರಾಷ್ಟ್ರೀಯ ಸಂಬಂಧವು ನಮಗೆ ಬೇಕೆ? ಇದಕ್ಕೆ ಉತ್ತರವನ್ನು ಭವಿಷ್ಯವೇ ಹೇಳಬೇಕಾಗಿದೆ.

* * *

## ಎರಡೇ ತಲಾಂತರಗಳ ಮಾತು!

ಮುಂಬಯಿಯ ಭಾರತ ಮಹಿಳಾ ವಿಶ್ವವಿದ್ಯಾಲಯದ ಕಾನ್ವಕೇಶನ್ ಭಾಷಣದಲ್ಲಿ ಮಂತ್ರಿವರ್ಯರಾದ ಕೆ. ಎಲ್. ಮುನ್ಶಿಯವರು ಮಾತಾಡುತ್ತಾ "ಒಂದೆರಡು ತಲಾಂತರಗಳಲ್ಲೇ ಭಾರತವು ಸ್ವತಂತ್ರವಾಗುವುದು. ಆಗ ನೀವು ಭಾವೀ ಜನಾಂಗವನ್ನು ಯೋಗ್ಯರೀತಿಯಲ್ಲಿ ಕಂಡು, ಭಾರತದ ಭವಿತವ್ಯವನ್ನು ಮಹತ್ಪೂರ್ಣವಾಗಿ ಮಾಡಬಹುದು" ಎಂದು ಹೇಳಿದರು. ತಥಾಸ್ತು! ಆಗ ನಾವೆಲ್ಲರೂ ಎಲ್ಲಿರಬಹುದೆಂಬುದೇ ನಮ್ಮ ಬೇಸರದ ಭಾವನೆ!

* * *

## ಭಾರತದ ದುರವಸ್ಥೆ

ಆರೋಗ್ಯದ ದೃಷ್ಟಿಯಿಂದ ನೋಡುವುದಿದ್ದರೆ ಭಾರತವು ಅಯೋಗ್ಯ ರಾಷ್ಟ್ರವೆಂದು ಕಾಣುತ್ತದೆ! ಎಲ್ಲರೂ ತಮ್ಮ ದೇಹ ಪರಿಸ್ಥಿತಿಯನ್ನು ಸುಧಾರಿಸುವುದಕ್ಕಾಗಿ ಯುರೋಪಿಗೆ ತೆರಳುತ್ತಿದ್ದಾರೆ. ಮೊನ್ನೆ ಭೂಲಾಭಾಯಿಯವರು ಹೋಗಿಬಂದರು. ಆ ಬಳಿಕ ಮೆಹರಾಲಿಯವರು, ಪುರುಷೋತ್ತಮ ತ್ರಿಕಮ್‌ದಾಸರು, ಅನಂತರ ಪಂಡಿತ ನೆಹರುಗಳೂ ಹೋದರು. ಇವರ ಆರೋಗ್ಯವು ಚೆನ್ನಾಗಿರಲಿಲ್ಲವೆಂಬುದು ಸತ್ಯವಾಗಿರಬಹುದು. ಆದರೆ ಲಂಡನಿನಲ್ಲಿ ಇವರು ಮಾಡಿದ ಭಾಷಣಗಳನ್ನು ನೋಡುವಾಗ ಇವರೆಲ್ಲರೂ ಉತ್ತಮವಾದ ಆರೋಗ್ಯದಲ್ಲಿದ್ದರೆಂದು ಕಾಣುತ್ತದೆ. ಪ್ರಾಯಶಃ ದೇಹಪರಿಸ್ಥಿತಿಯು ಅಲ್ಲಿ ಸುಧಾರಿಸಿರಬೇಕು.

* * *

## ಕಿಂಚಿತ್ ಸಂತೋಷವೂ ಇಲ್ಲದಿದ್ದರೆ–

"ಈ ಜಗತ್ತಿನಲ್ಲಿರುವ ಮನುಷ್ಯನಿಗೆ ಕಿಂಚಿತ್ತಾದರೂ ಸಂತೋಷವಿಲ್ಲದಿದ್ದರೆ ಅವನು ಸಾಯುವುದೇ ಲೇಸು" ಎಂದು ತನ್ನಭಿಪ್ರಾಯವನ್ನು ಬರೆದು ನಿರುದ್ಯೋಗದ ದೆಸೆಯಿಂದಾಗಿ ಮದ್ರಾಸ್ ಪ್ರಾಂತ್ಯದ ಪುರಪರ್ ಎಂಬಲ್ಲಿ ಒಬ್ಬ ಯುವಕನು ಆತ್ಮಹತ್ಯ ಮಾಡಿಕೊಂಡನಂತೆ. ಜನಪ್ರೀತ ಸರಕಾರವು ಇದಕ್ಕೇನು ಮಾಡಬಹುದು?

* * *

## ಯುದ್ಧಕ್ಕಾಗಿ ಈಗಲೇ ಸಿದ್ಧತೆ.

ವಿಮಾನಧಾಳಿಯ ಫಲಿತಾಂಶವಾಗಿ ನಾಗರಿಕರು ಜಖಮಾದಾಗ ವೈದ್ಯಕೀಯ ಸಹಾಯವನ್ನೊದಗಿಸಲು ಕಲ್ಕತ್ತದಲ್ಲಿ ಈಗಲೇ ಹಣಸಂಗ್ರಹ ಹಾಗೂ ಸಿದ್ಧತೆಗಳಾಗುತ್ತಿವೆಯಂತೆ. ಸುತ್ತಮುತ್ತಲಿನ ಹಳ್ಳಿಗಳಲ್ಲಿ ಮಲೇರಿಯಾ, ಕ್ಷಯ ಮೊದಲಾದ ರೋಗಗಳ ಹಾವಳಿಯು ವಿಶೇಷವಾಗಿರುವಾಗ ಅವೆಲ್ಲವನ್ನು ಮರೆತು ಭಾವೀ ಸಿದ್ಧತೆಗಳನ್ನು ಮಾಡುತ್ತಿರುವ ಅಲ್ಲಿಯ ವೈದ್ಯಕೀಯ ಇಲಾಖೆಯ ಅಧಿಕಾರಿಗಳು ಪ್ರಶಂಸನೀಯರಾಗಿದ್ದಾರೆಂದು ಪ್ರತ್ಯೇಕ ಹೇಳಬೇಕೆ?

* * *

## ಕರ್ನಾಟಕ ಏಕೀಕರಣ!

ಕರ್ನಾಟಕ ಏಕೀಕರಣ ಪರಿಷತ್ತು ಸ್ವಲ್ಪ ಸಮಯದ ಹಿಂದೆ ನಡೆಯಿತಷ್ಟೆ. ಆದರೆ ಅದರ ಪ್ರಭಾವವು ದಕ್ಷಿಣ ಕನ್ನಡಕ್ಕೆ ಇನ್ನೂ ಬರಲಿಲ್ಲ. ಏಕೀಕರಣದ ಕುರಿತು ಖಾಸಗಿಯಾಗಿ ಮಾತಾಡುವಾಗ ಇತ್ತೀಚೆಗೆ ಒಬ್ಬ ಏಕೀಕರಣ ಧುರೀಣರಂದರು: "ಏನು ಪ್ರಚಾರ ಸ್ವಾಮಿ? ಮಳೆಗಾಲದಲ್ಲಿ ಏನು ಮಾಡುವುದು?" ಸಕಾರಣವಾದ ವಾದವಿದು! ದುರದೃಷ್ಟವಶಾತ್ ಮಳೆಗಾಲದ ಬಳಿಕ ಬರುವಂತಹದು ಚಳಿಗಾಲ!

* * *

## ರಾಜಾಜಿಯವರ ವಿದ್ಯಾಯೋಜನೆ!

ಮದ್ರಾಸಿನ ಪ್ರಧಾನರಾದ ರಾಜಾಜಿಯವರು ಇತ್ತೀಚೆಗೆ ಜನಪದಕ್ಕೆ ಶಿಕ್ಷಣವೀಯುವ ನೂತನ ವಿಧಾನವೊಂದನ್ನು ಕಂಡು ಹಿಡಿದಿದ್ದಾರೆ. ಪ್ರತಿಯೊಂದು ಗ್ರಾಮದಲ್ಲಿರುವ ಕೆರೆ, ಬಾವಿ, ಮನೆ, ತೋಟ, ಮೊದಲಾದುವುಗಳ ಮೇಲೆ ಸ್ಥಳೀಯ ಭಾಷೆಯಲ್ಲಿ ದೊಡ್ಡ ಅಕ್ಷರಗಳಲ್ಲಿ ಸಂಬಂಧ ಪಟ್ಟವುಗಳ ಹೆಸರನ್ನು ಬರೆದು ತೂಗಾಡಿಸುವುದು. ಇದನ್ನು ಕಂಡು ಹಿರಿಯರೂ ಕಿರಿಯರೂ ಕಲಿತು ವಿದ್ಯಾವಂತರಾಗುವರೆಂಬುದೇ ಅವರ ನೂತನ ಯೋಜನೆಯ ಸಾರ. ಪ್ರಾಥಮಿಕ ಶಾಲೆಯ ಉಪಾಧ್ಯಾಯರು ತಮ್ಮ ಕೆಲಸದ ಕುರಿತು ಜಾಗರೂಕರಾಗಿರುವುದು ಲೇಸು.

* * *

## ಇತರರ ಹಣದಿಂದ ಯಜಮಾನಿಕೆ

ಬಂಡಾಯಗಾರರ ಧುರೀಣನಾದ ಜನರಲ್ ಫ್ರೇಂಕನು ಬಹು ಬುದ್ಧಿವಂತನೆನ್ನಬೇಕು. ಕಾರಣ– ವಿದೇಶಾಂಗ ಮಂತ್ರಿಯ ಸಹಾಯವಿಲ್ಲದೆ ಇಟೆಲಿಯ ಕೌಂಟ್ ಸಿಯಾನೋನನ್ನು ತನ್ನ ಮಂತ್ರಿಯಾಗಿ ಉಪಯೋಗಿಸಿ ಇಟೆಲಿಯಿಂದ ತಂದ ಆಹಾರವನ್ನು "ತನ್ನ" ಸೈನ್ಯಕ್ಕೆ ಕೊಟ್ಟು ಬ್ರಿಟನಿನ ಏಜಂಟನನ್ನು ಪ್ರಧಾನಾಗಿ ಪತ್ರಗಳನ್ನೊಯ್ಯುವ ಚಾರಕನನ್ನಾಗಿ ಉಪಯೋಗಿಸುವ ಸಾಮರ್ಥ್ಯವು ಅವನದು! ಈ ರೀತಿಯಲ್ಲಿ ಆರ್ಥಿಕ ಸ್ವಾತಂತ್ರ್ಯವನ್ನು ಸಾಧಿಸಿ, ಯುದ್ಧ ಮಾಡುವ ಕಲಿಗಳು ಇನ್ನಾರೂ ಇರಬಹುದೇ?

* * *

# ಧುರೀಣರ ಮಹತ್ವದ ರಹಸ್ಯವೇನು?

**ಕೇವಲ ಭಾಷಣಗಳಿಂದ ಕೋಟ್ಯಂತರ ಜನರನ್ನು ತಾವೆನ್ನುವಂತೆ ಕುಣಿಸುವ ವಿವಿಧ ರಾಷ್ಟ್ರಗಳ ಮುಂದಾಳುಗಳು ಜಾದುಗಾರರೆ? ಅಥವಾ ಜನತೆಯು ಅವರಿಗೆ ಬೆದರಿ ಅವರ ತಾಳಕ್ಕೆ ಸರಿಯಾಗಿ ಕುಣಿಯುವುದೆ?**

ಲಾಯಡ್ ಜಾರ್ಜರು ಅಧಿಕಾರದಲ್ಲಿದ್ದಾಗ ಅವರಿಗಿದ್ದಷ್ಟು ವೈಯಕ್ತಿಕ ವರ್ಚಸ್ಸು ಇನ್ನಾರಿಗೂ ಇರಲಿಲ್ಲವೆಂದು ಜನರೆನ್ನುವುದುಂಟು. ಅವರೊಡನೆ ವೈಯಕ್ತಿಕ ವಿಮರ್ಶೆಗೆಂದು ಹೋದವರಲ್ಲಿ ಅನೇಕರು ತನ್ನಷ್ಟಕ್ಕೇ ಸುಮ್ಮಗಾಗುವುದು ಹೆಚ್ಚೆಂದು ಪ್ರತೀತಿ.

ಮಹಾಯುದ್ಧಕಾಲದಲ್ಲಿ ಅವರ ಭಾಷಣವನ್ನು ಕೇಳಿದ ಬಳಿಕ ಜನರು, ಮಹಾಪುರುಷನೊಬ್ಬನ ಭಾಷಣವನ್ನು ಕೇಳಿದಂತಾಯಿತೆಂದು ಸಮಾಧಾನಪಟ್ಟು, ಅವ್ಯವಸ್ಥೆಯ ಗೊಂದಲದಲ್ಲೂ ಧೈರ್ಯವನ್ನು ಪ್ರದರ್ಶಿಸಿದರೆಂದು ಪ್ರಶಂಸಿಸಿ ತೆರಳಿದ್ದುಂಟು. ವೇಲ್ಸ್ ದೇಶದ ಈ ಜಾದುಗಾರನಿಗೆ ವಿಜಯವು ದೊರಕಲು ಮೂಲಕಾರಣವೆಂದರೆ ಅವನಲ್ಲಿರುವ ಒಂದು ಶಕ್ತಿ. ಇದರ ಸತ್ಯಾಂಶವೆಂದರೆ ಲಾಯಡ್ ಜಾರ್ಜರು ಜನಮನವನ್ನು ತನಗೆ ಬೇಕಾದಂತೆ ತಿರುಗಿಸುವಷ್ಟು ಶಕ್ತರಾಗಿದ್ದರು. ಜನತೆಗೆ ಸೂಚನೆಯನ್ನು ಯಶಸ್ವಿಯಾಗಿ ಕೊಡಲು ಶಕ್ತರಾಗಿದ್ದರು.

ಇಂದು ಜನಪದವು ಕೇಳುತ್ತಿರುವ ಸರ್ವಾಧಿಕಾರಿಗಳ ಮಹತ್ವಕ್ಕೂ ಜನತಾ ಸೂಚನಾಶಕ್ತಿಯೆಂಬೀ ವಿಚಾರವೇ ಮೂಲಕಾರಣವಾಗಿದೆ.



ಗಾಂಧಿಜಿ



ಕಮಾಲ್‌ಪಾಷರು

ಮುಸ್ಸೋಲಿನಿ!– ಜನರು ಚಕಾರವಾಡದೆ ವಿಧೇಯತೆಯಿಂದ ವರ್ತಿಸುತ್ತಾರೆ. ಇಟಲಿಯಲ್ಲಿದ್ದ ಶತಮಾನ ಶತಮಾನಗಳಷ್ಟು ಹಳೆಯದಾದ ರಾಜಕೀಯ ವಾತಾವರಣವನ್ನು ಒಬ್ಬ ವ್ಯಕ್ತಿಯು ಬದಲಾಯಿಸುವನೆಂದು, ಇಟಲಿಯ ಸಾರ್ವಜನಿಕ ಜೀವನವನ್ನು ಪರಿಶುದ್ಧಗೊಳಿಸಿ ವಿರೋಧ ಶಕ್ತಿಗಳನ್ನು ಒಂದು ಮಾಡಿ ಸಮಗ್ರ ರಾಷ್ಟ್ರವೇ ಎಚ್ಚತ್ತು ಕೆಲಸಮಾಡುವಂತೆ ಯಾರಾದರೂ ಸೂಚಿಸಿದ್ದರೆ ಕೂಡಲೆ ಗೊಳ್ಳೆಂದು ನಗುತ್ತಿದ್ದರು. ಆದರೆ ಮುಸ್ಸೋಲಿನಿಯು ಈ ಅಸಾಧ್ಯಕಾರ್ಯವನ್ನು ಮಾಡಿದ್ದಾನೆ. ಅವನಲ್ಲಿ ಅವರ್ಣನೀಯವಾದೊಂದು ಸೂಚನಾಶಕ್ತಿ ಮತ್ತು ಧೈರ್ಯವಿದೆ. ಇದರಿಂದಾಗಿಯೇ ಅವನು ತನ್ನ ರಾಷ್ಟ್ರದಲ್ಲಿ ಜಾದುಗಾರನಂತೆ ಬೇಕಾದಂತೆ ವರ್ತಿಸುತ್ತಿರುವುದು.

ಭಾರತದಲ್ಲಿ ಮಹಾತ್ಮಾ ಗಾಂಧಿಯೆಂಬ ಹೆಸರಿನ ಪರಿಚಯವಿಲ್ಲದವರಿಲ್ಲ. ಅವರ ದರ್ಶನಕ್ಕಾಗಿ ಮಿಲಿಯಗಟ್ಟಲೆ ಜನರು ನೂರಾರು ಮೈಲು ನಡೆಯುತ್ತಾರೆ. ಅವರನ್ನು ಕಂಡೊಡನೆ ಮಿಲಿಯಗಟ್ಟಲೆ ಭಾರತೀಯರ ಹೃದಯವು ಪ್ರೇಮಾದರಗಳಿಂದ ತುಂಬಿ ಹೋಗುತ್ತದೆ. "ಅರೆನಗ್ನ ಫಕೀರರ" ನುಡಿಗಳು ನಿದ್ರಾವಸ್ಥೆಯಲ್ಲಿದ್ದ ಬಡ

ಭಾರತೀಯರನ್ನು ಹೊಡೆದೆಬ್ಬಿಸಿವೆ. ಸಾಮ್ರಾಜ್ಯಶಾಹೀ ಬ್ರಿಟನನ್ನು ವಿರೋಧಿಸುವಷ್ಟು ಧೈರ್ಯವನ್ನು ತಂದೊಡ್ಡಿವೆ. ಇವೆಲ್ಲವುಗಳಿಗೆ ಮೂಲಕಾರಣವೆಂದರೆ ಮಹಾತ್ಮರಲ್ಲಿ ಅಸಾಮಾನ್ಯವಾದ ಧೈರ್ಯವಿದೆ, ಅದೊಂದು ತರದ ಅಪೂರ್ವ ಶಕ್ತಿಯಿದೆ.

ಹಿಟ್ಲರರ ಕೀರ್ತಿ ರವಿಯ ಉದಯ, ಅವರ ಮಿಲಿಯಗಟ್ಟಲೆ ಅನುಯಾಯಿಗಳ ಮೇಲೆ ಅವರು ನಡೆಸುವ ಅಧಿಕಾರ, ಇವೆಲ್ಲವುಗಳನ್ನು ಅವರ ಇಂದಿನ ಬೋಧೆಯ ಆಧಾರದ ಮೇಲೆಯೇ ವಿವರಿಸುವುದು ಸರಿಯಲ್ಲ. ಈ ವಿಜಯದ ರಹಸ್ಯವು ಹಿಟ್ಲರರ ಅಂತರಾಳದಲ್ಲಡಕವಾಗಿದೆ. ಅವರ ಕಣ್ಣುಗಳಲ್ಲಿರುವ ಆ ಅಪೂರ್ವ ಕಾಂತಿಯನ್ನು ಅವರ ಭಾವಚಿತ್ರಗಳಲ್ಲಿ ಕಾಣದವರಾರು? ವಿದ್ಯುಚ್ಛಕ್ತಿಯಂತಿರುವ ತನ್ನ ವೈಯಕ್ತಿಕ ವರ್ಚಸ್ಸಿನ ಪ್ರಭಾವದಿಂದ ಅವರು ಆಡುವ ಅಸಂಖ್ಯಾತ ಶಬ್ದಗಳನ್ನು ಅನುಯಾಯಿಗಳು ಮೆಚ್ಚದಿದ್ದರೂ ಒಪ್ಪಿಕೊಳ್ಳಬೇಕಾಗಿದೆ. ಈ ಅಸಾಮಾನ್ಯ ಶಕ್ತಿಯೇ ಮಿಲಿಯಾಂತರ ಜನರ ಮೇಲೆ ಅವರಿಗಿರುವ ಅಧಿಕಾರದ ರಹಸ್ಯವಾಗಿದೆ.

ಮುಸ್ತಾಫಾ ಕಮಾಲ್ ಪಾಶರನ್ನು ನೋಡಿರಿ! ಅವರ ಮುಖವೇ ಧೃಡತೆಯನ್ನು, ಧೈರ್ಯವನ್ನು ಸಾರುತ್ತಿದೆ. ಹತ್ತು ವರುಷಗಳಲ್ಲಿ ಕೇವಲ ಹಳ್ಳಿಯಾಗಿದ್ದ ಇಸ್ತಾಂಬೂಲನ್ನು ಲಂಡನಿನ ಬಿರ್ಮಿಂಗಾಮಿನಂತೆ ಮಾಡಲು "ಗಾಝೀ" ಕಮಾಲ್ ಪಾಶರಿಗಲ್ಲದೆ ಮತ್ತಾರಿಗೂ ಸಾಧ್ಯವಿದ್ದಿಲ್ಲ ಭಯಂಕರ ವಿರೋಧವಿದ್ದರೂ ಕಮಾಲರು ಅದನ್ನು ಅನುಭವಿಸಿದರು, ಸಹಿಸಿದರು. ಆ ಮಹನೀಯನನ್ನು ವಿರೋಧಿಸುವುದೆಂದರೆ ಸೋಲನ್ನೊಪ್ಪಿಕೊಂಡಂತೆ. ತಾನನ್ನುವಂತೆ ನಡೆಯುವ ಸ್ವಭಾವ ಕಮಾಲರದು. ನುಡಿಯು ಅಪ್ರಯೋಜಕವಾದಲ್ಲಿ ಮುಷ್ಟಿಯಲ್ಲಿ ಕಾರ್ಯ ಸಾಧಿಸುವವರವರು. ಅವರ ವ್ಯಕ್ತಿತ್ವದ ರಹಸ್ಯವು ಅವರ ಮನೋಶಕ್ತಿಯ ಮೇಲೆ ಹೊಂದಿಕೊಂಡಿದೆ.

ಜನಪದವನ್ನು ಹುರಿದುಂಬಿಸುವಷ್ಟು ದೊಡ್ಡ ಶಕ್ತಿಯು ಮತ್ತಾವುದೂ ಇಲ್ಲ. ಅಯೋಗ್ಯರ ಕೈಗೆ ಈ ಶಕ್ತಿಯು ದೊರಕಿದರೆ ಅದು ಎಂತಹ ಹಾನಿಯನ್ನುಂಟು ಮಾಡುವುದೆಂದು ಹೇಳಲಾಗುವುದಿಲ್ಲ. ಒಬ್ಬ ವ್ಯಕ್ತಿಯ ಉದಾತ್ತ ಧ್ಯೇಯಗಳ ಸಂಪಾದನೆಗಾಗಿ ಇವುಗಳನ್ನು ಉಪಯೋಗಿಸಿದರೆ ಯಾವ ಹಾನಿಯೂ ಇಲ್ಲ.

# ಚಾ

**ಮಾನವ ಜಾತಿಯ ಅರ್ಧಪಾಲಷ್ಟು ಜನರು ಈ ಪಾನೀಯವನ್ನು ಸೇವಿಸುತ್ತಾರೆ. ವಿದ್ವಾಂಸರು ಇದರ ಮಹತ್ವದ ಕುರಿತು ಮಿತಿಯಿಲ್ಲದೆ ಪ್ರಶಂಸಿಸಿದ್ದಾರೆ. ಇದರ ರಹಸ್ಯವೇನು ?**

ಒಂದು ಸಾವಿರದ ಒಂಭೈನೂರು ಕೋಟಿ ಜನರು ಅಖಿಲ ಜಗತ್ತಿನಲ್ಲಿದ್ದಾರೆಂದು ಒಂದು ಗಣನೆ. ಇದರಲ್ಲಿ ಅರ್ಧಕ್ಕಿಂತಲೂ ಹೆಚ್ಚು ಮಂದಿ 'ಚಾ' ಎಂಬ ಶಬ್ದವನ್ನು ಅರಿಯದಿರಲಾರರು. ಮೊದಲು ಇಂಗ್ಲಿಷ್ ಭಾಷೆಯಲ್ಲಿ ಕೂಡಾ ಇದಕ್ಕೆ 'ಟೀ' ಎನ್ನುತ್ತಿದ್ದರಲ್ಲದೆ 'ಟೀ' ಎಂದಲ್ಲ. ಚಾ ಮತ್ತು ಹಿಮಾಲಯ ಪರ್ವತಗಳೊಳಗೆ ವಿಶೇಷ ವ್ಯತ್ಯಾಸವಿಲ್ಲವೆಂದು ಹೇಳಿದೊಡನೆಯೇ ನೀವು ನಗಾಡಬಹುದು.

ೊ ೊ ೊ

ಅಮೇರಿಕವು ಜಗತ್ತಿಗೆ ಹೊಗೆಸೊಪ್ಪನ್ನು ಶೋಧಿಸಿ ಕೊಟ್ಟಿದ್ದರೆ ಏಸ್ಯಾಖಂಡವು ಕ್ರಿಸ್ತ ಪೂರ್ವ ೨೭೩೭ರಲ್ಲೇ ಚಾವನ್ನು ಕೊಟ್ಟಿದೆ ಇದಕ್ಕಾಗಿ ಐರೋಪ್ಯರಾಷ್ಟ್ರಗಳು ಏಸ್ಯಕ್ಕೆ ಚಿರಋಣಿಯಾಗಿರಬೇಕಾಗಿದೆ. ಸತ್ಯದ ಪ್ರಚಾರಕ್ಕಾಗಿ, ಸಾಮಾನ್ಯ ಜನರು ಈಗಲೂ ಚಾ ಪಾನ ಮಾಡುತ್ತಾ ಅಪಪ್ರಚಾರ ಕಾರ್ಯವನ್ನು ಭರದಿಂದ ಸಾಗಿಸುವುದುಂಟು. ಆದುದರಿಂದಲೇ ಪ್ರಾಮುಖ್ಯ ಇಂಗ್ಲಿಷ್ ಕಾದಂಬರಿಗಾರರಾದ ಹೆನ್ರಿ ಫೀಲ್ಡಿಂಗರು 'ಪ್ರೇಮ ಮತ್ತು ದುಷ್ಪ್ರಚಾರಗಳು ಚಾವನ್ನು ಮತ್ತಷ್ಟು ಮಧುರಗೊಳಿಸುತ್ತವೆ' ಎಂದು ಹೇಳಿರಬಹುದು.

ೊ ೊ ೊ

ಪಾಶ್ಚಾತ್ಯರ ವಿಧಾನ ಹಾಗಾಯಿತು. ಪೌರ್ವಾತ್ಯರ ರೀತಿಯೇ ಪ್ರತ್ಯೇಕ. ಬಡಚೀನೀಯನು ಸತ್ಯವಾಡುತ್ತಾ ತನ್ನ ಹಿರಿಯರ ಕಾಲದ ಪಾನವಾದ ಚಾ ಕುಡಿಯುತ್ತಾನೆ. ನಮ್ಮ ಭಾರತವು ಚಾದ ದೃಷ್ಟಿಯಲ್ಲಿ ನೋಡುವುದಿದ್ದರೆ ಅದೇನೂ ಹೀನ ರಾಷ್ಟ್ರವಾಗಿಲ್ಲ. ಸರ್ ಜೇಮ್ಸ್ ಗ್ರಿಗ್ಗರ ಬಜೆಟಿಗೆ ಶೇಕಡಾ ಹತ್ತರಷ್ಟು ಅಂಶವನ್ನು ನಾವು ಸಕ್ಕರೆ ಮತ್ತು ಚಾದಿಂದಲೇ ಕೊಡುತ್ತಿದ್ದೇವೆ. ನಮ್ಮ ದೇಶದಲ್ಲಿ ಹಾಲು ಬಹಳ ಕಡಿಮೆಯಾಗಿರಬಹುದು. ಆದರೆ ನಮ್ಮಜ್ಜಿಯಂತಿರುವ ವೈಸರಾಯರು ನಮ್ಮಲ್ಲಿಯ ದನಗಳನ್ನು ಅಫಘಾನಿಸ್ಥಾನದ ರಾಜರಿಗೆ ಕೊಟ್ಟು, ಅಲ್ಲಿಂದ ಹೃಷ್ಟಪುಷ್ಟವಾದ ಬೀಜದ ಹೋರಿಗಳನ್ನು ವಿನಿಮಯ ಮಾಡಿ ನಮ್ಮ ಭಾವೀ ಜನಾಂಗವಾದರೂ ಕ್ಷೀರ ಸಮೃದ್ಧ ಕಾಲದಲ್ಲಿ ಜೀವಿಸಿ, ಮುಂದೆ ತಯಾರಿಸಬಹುದಾದ ಚಾ ಪಾನಕ್ಕೆ ಬೇಕಷ್ಟು ಹಾಲನ್ನು ಸೇರಿಸಲು ಸಿದ್ಧತೆಗಳನ್ನು ಮಾಡುತ್ತಿದ್ದಾರೆ. ಆದುದರಿಂದಲೇ ಇತ್ತೀಚೆಗೆ ಪತ್ರಿಕೆಗಳಲ್ಲಿ ಭಾರತೀಯ ಪಾನೀಯವಾದ ಚಾದ ಕುರಿತು ಅಷ್ಟೊಂದು ಹೆಚ್ಚಾಗಿ ಜ್ಯಾಹೀರಾತುಗಳು ಪ್ರಕಟವಾಗುತ್ತಿರುವುದು.

ೊ ೊ ೊ

ನಮ್ಮಪ್ಪ, ಅಜ್ಜಂದಿರ ಕಾಲದಲ್ಲಿ ನಮ್ಮನ್ನು ಬಹಳ ಸೊಗಸಾಗಿ ಆಳುತ್ತಿದ್ದ ಮಹಾಮಾತೆಯಾದ ವಿಕ್ಟೋರಿಯಾ ರಾಜ್ಞಿಯಂತಿರಲಿ, ಇಂಗ್ಲೆಂಡಿನ ಅನ್ನಿ ರಾಣಿಯು ಕೂಡಾ ಸಾಧಾರಣ ಚಾವನ್ನು ಪವಿತ್ರವಾದ ತಾಯಿತದಂತೆ ಅಡಗಿಸಿಟ್ಟು, ಅದು ಅಮೃತದಂತಹ ಪಾನೀಯವೆಂದು ನಮ್ಮ ಜ್ಯಾಹೀರಾತುದಾರರನ್ನುವಂತೆ ಆಕೆಯೂ ಹೇಳುತ್ತಿದ್ದಳು. ಮುಂಬಯಿ ನಗರವನ್ನು ಬಹು ಕಾಲದ ಹಿಂದೆ ಇಂಗ್ಲೆಂಡಿನ ತನ್ನ ಪ್ರಸಿದ್ಧ ಗಂಡನಿಗೆ ವರದಕ್ಷಿಣೆಯಾಗಿ ಕೊಟ್ಟ ಆ ಪೋರ್ಚುಗೀಸ್ ರಾಣಿ ಕೆದರಿನಳು ಕೂಡಾ ಈ ಚಾವನ್ನು ಬಹಳ ಆದರದಿಂದ ಕಾಣುತ್ತಿದ್ದಳು. ಹೇಗಿದ್ದರೂ ಚಾ ಭೂಲೋಕ

## ನನಗರಿಯದು- ನಿಮಗೆ



**ವಲ್ಲಭಾಯಿ ಪಟೇಲರು ಯಾವ ಗ್ರಾಮದ ಪಟೇಲರು ?**

ದಲ್ಲಿರುವ ಜನಸಂಖ್ಯೆಯ ಅರ್ಧಕ್ಕಿಂತಲೂ ಹೆಚ್ಚಿನವರ ದಿನಚರಿಯ ಪಾನೀಯವಾಗಿದೆಯೆಂದು ಹೇಳುವುದರ ಲ್ಲಾವ ಸಂಶಯವೂ ಇಲ್ಲ.

೦ ೦ ೦

ಯಾವುದಾದರೊಂದು ವಿಚಾರವನ್ನು ಯಶಸ್ವಿಯಾಗಿ ಮಾಡಬೇಕಾದರೆ ಒಂದಿಷ್ಟು ಚಾ ಕುಡಿಯಲೇ ಬೇಕಾಗುತ್ತದೆ. ಪ್ರಸಿದ್ಧ ಇಂಗ್ಲಿಷ್ ವಿದ್ವಾಂಸರಾಗಿದ್ದ ಡಾ. ಜ್ಹೋನ್ಸನ್‌ರವರು ತನ್ನ ಕಾರ್ಯದರ್ಶಿಯಾದ ಬೋಸ್‌ವೆಲ್ಲರ ಗುಣನಡತೆ ಅಥವಾ ಗೋಲ್ಡ್‌ಸ್ಮಿತ್ ಕವಿಯ ಬಟ್ಟೆಬರೆಗಳಂಥ ಚಿಕ್ಕ ವಿಚಾರಗಳ ಕುರಿತು ತಮ್ಮ ಅಭಿಪ್ರಾಯಗಳನ್ನು ಹೇಳುವ ಮೊದಲು ೨೪ ಕಪ್ ಚಾ ಕುಡಿಯುತ್ತಿದ್ದರಂತೆ. 'ಚಾ, ನೀನೆಂತಹ ಯೋಗಿ, ಜನೋಪಯೋಗಿ!' ಯೆಂದು ಅದೆಷ್ಟು ಕವಿಗಳು ಹಾಡಲಿಲ್ಲ.

೦ ೦ ೦

ಅಸ್ಸಾಮ್ ಪ್ರಾಂತ್ಯವು ಚಾದ ತವರೂರು. ಆದರೆ ಚೀನದಲ್ಲಿ ಇಂಗ್ಲಿಷರು ಮಾರುತ್ತಿದ್ದ ಅಫೀಮನ್ನು ದೂರೀಕರಿಸಿ ಚಾಪಾತ್ರೆಯನ್ನು ಮೇಲೆತ್ತಿ ಜಗತ್ತಿಗೆ ತೋರಿಸುವ ತನಕ ಅದರ ಪ್ರಾಮುಖ್ಯತೆಯ ಅರಿವು ಇತರರಿಗಿದ್ದಿಲ್ಲ. ಗುಪ್ತ ರಾಜ್ಯದಲ್ಲಿದ್ದ ಚಾ ಆಧುನಿಕ ವ್ಯಾಪಾರ ರಂಗಕ್ಕೆ ಕೂಡಾ ಬಂತು. ಬೇಸರವಾದಾಗ ರಾಜನೀತಿಜ್ಞರಿಂದ ಮೊದಲ್ಗೊಂಡು ಸಾಮಾನ್ಯ ಜನರ ತನಕವೂ ಚಾಪಾನದ ಪ್ರಯೋಜನವನ್ನು ಪಡೆಯುತ್ತಾರೆ. ಅಂದಿನಿಂದ ಚಾದ ಪ್ರಗತಿಯು ಕಡಿಮೆಯಾಗಲಿಲ್ಲ. ಅತ್ಯಾಧುನಿಕ ಜನರು ಕೂಡಾ ಚಾವನ್ನು ಅತ್ಯಾಧುನಿಕ ಪಾನೀಯವಾಗಿ ಉಪಯೋಗಿಸುತ್ತಿದ್ದಾರೆ. ಮಿತ್ರರು ಬಂದರೆ ಚಾ. ಬಂಧುಬಾಂಧವರು, ಯಾರು ಬಂದರೂ ಚಾ. ಇದರಿಂದಾಗಿಯೇ ಇತ್ತೀಚೆಗೆ 'ಟೀ ಪಾರ್ಟಿ', 'ಟೀ ಡಾನ್ಸ್' ಮೊದಲಾದ ಸಮಾರಂಭಗಳು ಪ್ರಾರಂಭವಾದುದು. ಸಾಮಾನ್ಯ ಹಳ್ಳಿಯಿಂದ ಮೊದಲ್ಗೊಂಡು ರಾಜಧಾನಿಗಳಲ್ಲಿರುವ ಅತ್ಯಂತ ಭವ್ಯ ಅರಮನೆಗಳಲ್ಲಿ ಕೂಡಾ ಸಂಜೆಯ ವೇಳೆಗೆ ಚಾ.

೦ ೦ ೦

ಆದರೆ! ಬಂದೊಡನೆಯೇ ಉಪದ್ರವದ ಸುಳಿವಿದೆಯೆಂದು ಸುಸ್ಪಷ್ಟ. ದಕ್ಷಿಣ ಭಾರತೀಯರು ಚಾ ದಿಂದಲೂ ಕಾಫಿಯೊಡನೆ ಹೆಚ್ಚಿನ ಮೈತ್ರಿಯನ್ನು ಮಾಡಿಕೊಂಡಿದ್ದಾರೆ. ಹಿಂದಿ ಮತ್ತು ಮಾತೃಭಾಷೆಗಳೊಳಗಿನ ಸ್ಪರ್ಧೆಯಂತೆ ಚಾ ಕಾಫಿಗಳ ಸಂಬಂಧವಿರಬೇಕೆಂದಿಲ್ಲ.

೦ ೦ ೦

ಕೊನೆಯದಾಗಿ, ಪ್ರಸಿದ್ಧ ಇಂಗ್ಲಿಷ್ ಸಾಹಿತಿ ಡಿ ಕ್ವಿನ್ಸೆಯ ಮಾತುಗಳಲ್ಲಿ ಚಾಪಾನದ ಕುರಿತು ಹೀಗೆನ್ನಬೇಕಾಗಿದೆ:—

'ಇದು ಸರ್ವದಾ ಚಿಂತಕರ ಪ್ರೇಮದ ಪಾನೀಯವಾಗಿ ಉಳಿಯಲಿರುವುದು.......ನನಗಾಗಿ ಹದಿನೇಳಡಿ ಉದ್ದ, ಹನ್ನೆರಡಡಿ ಅಗಲವಾಗಿದ್ದು, ಏಳೂವರೆ ಅಡಿಗಿಂತ ಎತ್ತರವಿಲ್ಲದ ಒಂದು ಕೊಟ್ಟಡಿಯನ್ನು ಅದರಲ್ಲಿ ಸಾಧ್ಯವಿದ್ದಷ್ಟು ಪುಸ್ತಕಗಳನ್ನು ತುಂಬಿರಿ—ಅದನ್ನು ಪುಸ್ತಕಮಯವನ್ನಾಗಿಯೇ ಮಾಡಿರಿ. ನನಗಾಗಿ ಅಲ್ಲಿ ಬೆಚ್ಚಗಿನ ಬೆಂಕಿಯ ಚಿತ್ರವನ್ನು ಬರೆಯಿರಿ. ಮತ್ತು ಅಲ್ಲಿ ನಿರಹಂಕಾರಿಯಾದ ವಿದ್ವಾಂಸನ ವಸತಿಗೆ ಯೋಗ್ಯವಾದ ಸರಳಸುಂದರ ಆಸನಗಳು ಇರಲಿ. ಆ ಬೆಂಕಿಯ ಬಳಿಯಲ್ಲಿ ಒಂದು ಚಾ ಮೇಜು ಚಿತ್ರಿಸಲ್ಪಡಲಿ. ಆ ಮೇಲೆ (ಅಂತಹ ಬಿರುಗಾಳಿಯ ಕಟ್ಟಿರುಳಲ್ಲಿ ನನ್ನ ಭೆಟ್ಟಿಗಾಗಿ ಯಾವ ಪ್ರಾಣಿಯೂ ಬರುವ ಸಂಭವವಿಲ್ಲವಾದ ಕಾರಣ) ಒಂದೇ ಜೊತೆ ಕಪ್ಪುಬಸಿಗಳನ್ನು ಒಂದು ಹರಿವಾಣದಲ್ಲಿ ಹಾಕಿರಿ. ಬಳಿಕ ನಿಮಗೆ ಸಂಜ್ಞಾಮಯವಾಗಿ ಚಿತ್ರಿಸಲು ಗೊತ್ತಿದ್ದರೆ ನನಗಾಗಿ ಅನಂತವಾದ ಒಂದು ಚಾದಾನಿಯನ್ನು ಚಿತ್ರಿಸಿರಿ. (ನಾನು ಹೆಚ್ಚಾಗಿ ರಾತ್ರಿ ೮ ಗಂಟೆಯಿಂದ ಬೆಳಿಗ್ಗೆ ೪ ಗಂಟೆಯ ವರೆಗೆ ಚಹಾ ಪಾನ ಮಾಡುತ್ತಿರುವವನು.) ಹಾಗೂ ನನ್ನಗಾಗಿಯೇ ಚಹಾ ಕುದಿಸುವುದೂ ಹೊಯ್ದುಕೊಳ್ಳುವುದೂ ಬಹಳ ಅಸಂತೋಷದ ಕೆಲಸವಾದುದರಿಂದ ನನಗಾಗಿ ಆ ಚಹಾ ಮೇಜಿನ ಬಳಿ ಒಬ್ಬಾಕೆ ಸುಂದರಿ ಯುವತಿಯನ್ನು ಚಿತ್ರಿಸಿರಿ.'

'ಚಾಪಾನದ ಅಭ್ಯಾಸವು ಮಾನವ ಜಾತಿಯಲ್ಲುಂಟಾಗುವ ಮೊದಲೇ ನಾವು ಹುಟ್ಟದಿರುವುದಕ್ಕಾಗಿ ದೇವರನ್ನು ಪ್ರಾರ್ಥಿಸಬೇಕಾಗಿದೆ'.

# ಧರ್ಮಾಭಿಮಾನಿಗಳು

**ಮಹಾಭಾರತ ಕಾಲದಲ್ಲಿ ಸಾಕ್ಷಾತ್ ಧರ್ಮರಾಯನು ಕಟ್ಟಿಸಿದ ಕುಂಭ ಕಾಶಿ ದೇವಸ್ಥಾನದ ಜೀರ್ಣೋದ್ಧಾರ ಕಾರ್ಯವನ್ನು ಕೈಕೊಂಡ ಮಹಾಶಯರು ಅರದ ಕಾಣಿಕವನ್ನು ಉಳಿಸಲೆತ್ನಿಸಿದರು—**

**ಆದರೆ**

**ಇನ್ನೊಬ್ಬ 'ಧರ್ಮಾಭಿಮಾನಿಗಳು' ಅವರಿಗೆ ಕೊಟ್ಟ ಪುರಸ್ಕಾರದ ರೀತಿಯು ಹೀಗಿದೆ—**



—•• ಉಪಾಧ್ಯಾಯರಿಂದ ••—

'ಅಂತರಂಗ'ದ ಪ್ರಥಮ ಸಂಚಿಕೆಗೆ ಒಂದು ಸಣ್ಣ ಕತೆ ಬರೆದು ಕಳುಹಿಸಬೇಕೆಂದು ಅನೇಕ ದಿವಸಗಳಿಂದ ಯೋಚಿಸುತ್ತಿದ್ದೇನೆ. ಏನೂಹೊಳೆಯಲಿಲ್ಲ. ಕಡೆಗೆ ನಮ್ಮಲ್ಲಿ ಮೊನ್ನೆ ನಡೆದ ಕತೆಯೊಂದು ನೆನಪಿಗೆ ಬಂತು. ಬಹಳ ಸ್ವಾರಸ್ಯದ ಕತೆ. ಅದನ್ನೇ ಬರೆದು ಬಿಟ್ಟೆ.

ಮಧ್ಯಾಹ್ನದ ಊಟ ತೀರಿಸಿ ವೀಳ್ಯದೆಲೆಯ ಹರಿವಾಣ ಹಿಡಿದುಕೊಂಡು ಚಾವಡಿಯಲ್ಲಿ ಬಂದು ಕುಳಿತಿದ್ದೆ. ಅಷ್ಟರಲ್ಲೇ ಒಬ್ಬರು ಹೆಬ್ಬಾಗಿಲು ದೂಡಿಕೊಂಡು ಒಳಗೆ ಬಂದರು. ನೋಡುವಾಗ ಯಾರೋ ದೊಡ್ಡ ಮನುಷ್ಯರೆಂದು ಕಾಣುತ್ತಿತ್ತು. ನನ್ನನ್ನು ನೋಡಿ ಬಹಳ ಮುಗುಳು ನಗೆಯಿಂದ ಮುಂದೆ ಬರುತ್ತಿದ್ದರು. ನನಗೇನೋ ಪರಿಚಿತರೆಂದು ಕಾಣಲಿಲ್ಲ. ವೀಳ್ಯದೆಲೆಯ ಕೆಲಸವನ್ನು ಅಲ್ಲಿಯೇ ಬಿಟ್ಟು ಅವರನ್ನು ನೋಡುತ್ತಾ ಕುಳಿತೆನು. ಪ್ರಾಯ ಏನಾದರು ನಾಲ್ವತ್ತು ಆದೀತು. ದುಂಡಗಾದ ಮುಖ, ದಪ್ಪವಾದ ದೇಹ. ಜರಿಯ ಮುಂಡಾಸು, ಉದ್ದವಾದ ಅಂಗಿ ಮುಖದಲ್ಲಿ ದೊಡ್ಡ ಅಕ್ಷತೆ. ಹತ್ತಿರ ಬರುತ್ತಾ ಎರಡೂ ಕೈ ಜೋಡಿಸಿ ಬಹಳ ವಯ್ಯಾರದಿಂದ 'ನಮಸ್ಕಾರ ಸ್ವಾಮಿ' ಎಂದರು. ನಾನೂ ನಮಸ್ಕಾರವೆಂದು ಹೇಳಿ ಎದುರಲ್ಲಿರುವ ಕುರ್ಚಿಗೆ ಕೈತೋರಿಸಿದೆ. ಅದನ್ನು ಹಿಂದೆ ಎಳೆದು ಅವರು ಕುಳಿತುಕೊಂಡರು.

ಅವರ ಹಾವಭಾವಗಳನು. ನೋಡಿ ಅಪರಿಚಿತರಾದ ಸಂಬಂಧಿಕರೋ ಅಥವಾ ಮೊದಲು ನನ್ನ ಪರಿಚಿತರಾಗಿದ್ದು ಈಗ ನನಗೆ ಅವರ ಗುರುತು ಮರೆತು ಹೋಗಿದೆಯೋ ಎಂದು ನನಗೆ ತಿಳಿಯಲಿಲ್ಲ. ಹೇಗೂ ಅವರ ಗುರುತು ನನಗಿಲ್ಲವೆಂದು ಒಮ್ಮೆಯೇ ತೋರಿಸುವುದು ಬೇಡವೆಂದು ಎಣಿಸಿ 'ತಮ್ಮನ್ನು ಎಲ್ಲಿಯೋ ನೋಡಿದಂತೆ ಕಾಣುತ್ತದೆ' ಎಂದೆ. 'ಇರಬಹುದು ಸ್ವಾಮಿ' 'ನಾನು ಅಲ್ಲಲ್ಲಿ ಯಾವಾಗಲೂ ಸಂಚಾರ ಮಾಡುತ್ತಲೇ ಇದ್ದೇನೆ ಮನೆಯಲ್ಲಿ ಎಲ್ಲರೂ ಕ್ಷೇಮವಷ್ಟೆ!' ಎಂದು ಬಹಳ ಅನುರಾಗದಿಂದ ಕೇಳುತ್ತಾ ತನ್ನ ಕೋಟಿನ ಒಳಗಿನ ಜೇಬಿಗೆ ಕೈಹಾಕಿ ಅಂದವಾದ ಪುಸ್ತಕವೊಂದನ್ನು ತೆಗೆದು ಮೇಜಿನ ಮೇಲಿಟ್ಟರು. ಇದು ಏನು ಗ್ರಹಚಾರವೆಂದು ನೋಡುತ್ತಾ ನಾನು ಸುಮ್ಮನೆ ಕುಳಿತೆನು. ಅವರು ತನ್ನ ಇನ್ನೊಂದು ಜೇಬಿನಿಂದ ಒಂದು ಬೆಳ್ಳಿಯ ಹರಿವಾಣವನ್ನು ತೆಗೆದು ಅದರಲ್ಲಿ ಒಂದು ಚೂರು ಒಣಗಿದ ಗಂಧ ಮತ್ತು ಒಂದು ಚೂರು ಒಣಗಿದ ಹೂವಿನ ಎಸಳನ್ನು ಇಟ್ಟರು. ಅಷ್ಟರಲ್ಲಿ ಇವರು ನನ್ನ ಸ್ನೇಹಾಭಿಲಾಷಿಗಳಾಗಿ ಬಂದವರಲ್ಲ, ದ್ರವ್ಯಾಭಿಲಾಷೆಯಿಂದ ಬಂದವರೆಂದು ನನಗೆ ಗೊತ್ತಾಗಿ 'ಇದೆಲ್ಲಾ ಏನು ಸ್ವಾಮಿ, ಹೇಳಿ ಬಿಡಿ' ಎಂದು ಕೇಳಿದೆನು. ಅವರು ಫಕ್ಕನೆ ಎದ್ದು ನಿಂತು ಕೈಜೋಡಿಸಿಕೊಂಡು ಅತ್ಯಂತ ನಮ್ರತೆಯಿಂದ—''ನನಗೆ ಕುಂಭಕಾಶಿಯಲ್ಲಾಯಿತು ಸ್ವಾಮಿ. ನಾನು ಒಬ್ಬ ಬ್ರಾಹ್ಮಣ. ವೇದಾಧ್ಯಯನ ಮಾಡಿದ್ದೇನೆ. ಏನೋ ಸಂಸಾರದಲ್ಲಿ ಸ್ವಲ್ಪ ವೈರಾಗ್ಯ ಬಂತು. ಒಂದು ದಿನ ರಾತ್ರಿಯಲ್ಲಿ ಶ್ರೀದೇವರು ಒಬ್ಬ ಬ್ರಾಹ್ಮಣನ ರೂಪದಲ್ಲಿ ಸ್ವಪ್ನದಲ್ಲಿ ಕಾಣಿಸಿಕೊಂಡು ನೀನು ನಿನ್ನ ಮನೆಯೆದುರು ಹಾಳುಬಿದ್ದಿರುವ ಶ್ರೀಲಕ್ಷ್ಮೀನಾರಾಯಣ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡು' ಎಂದು ಆಜ್ಞೆ ಕೊಟ್ಟ. ಅಂದಿನಿಂದ ಈ ಕಾರ್ಯವನ್ನು ಪ್ರಾರಂಭಿಸಿದ್ದೇನೆ. ಧರ್ಮಾಭಿಮಾನಿಗಳನ್ನು ಕಂಡು ಅವರಿಗೆ ಶ್ರೀಲಕ್ಷ್ಮೀನಾರಾಯಣನ ಗಂಧಪ್ರಸಾದವನ್ನು ಕೊಡುತ್ತಿದ್ದೇನೆ. ಪುಣ್ಯಾತ್ಮರು ಯಾರೂ ಯಥಾನುಶಕ್ತಿ ದ್ರವ್ಯಸಹಾಯ ಮಾಡದೆ ಹಿಂದೆ ಕಳುಹಿಸಲಿಲ್ಲ. ನಾನೇನು ಮಾಡ್ಯೇನು ಸ್ವಾಮಿ. ಶ್ರೀ ಲಕ್ಷ್ಮೀನಾರಾಯಣನು ನನ್ನ ಕೈಯಿಂದ ತನ್ನ ಕಾರ್ಯಗಳನ್ನು ಮಾಡಿಸಿಕೊಳ್ಳುತ್ತಿದ್ದಾನೆ. ಬಹಳ ಪುರಾತನ ದೇವಸ್ಥಾನ ಸ್ವಾಮಿ. ಬಹಳ ಪುರಾತನದ್ದು. ದೇವಸ್ಥಾನದ ಎದುರಿರುವ ಶಿಲಾಶಾಸನದಲ್ಲಿ ಮಹಾಭಾರತದ ಕಾಲದಲ್ಲಿ

ಸ್ಥಾಪನೆಯಾದದ್ದೆಂದು ಕಂಡುಬರುತ್ತದೆ. ಸಾಕ್ಷಾತ್ ಧರ್ಮರಾಯನೇ ಕಟ್ಟಿಸಿದ್ದೆಂದು ಇತಿಹಾಸ ಉಂಟು. ಸ್ಥಳಪುರಾಣದಲ್ಲಿ ರಾಮಾಯಣ ಕಾಲದ್ದೆಂತ ಕಾಣುತ್ತದೆ. ಒಟ್ಟಾರೆ ಬಹಳ ಪುರಾತನದ್ದು ಎಂಬುದರಲ್ಲಿ ಸಂದೇಹವಿಲ್ಲ. ಪ್ರತಿಷ್ಠೆಯಲ್ಲಿ ಸ್ವಾಮಿ! ಉದ್ಭವ, ಅತಿ ಸುಂದರವಾದ ವಿಗ್ರಹ. ಮನುಷ್ಯ ಕೃತವೆಂದು ಎಷ್ಟು ಮಾತ್ರಕ್ಕೂ ಹೇಳಲು ಸಾಧ್ಯವಿಲ್ಲ. ಮೊದಲು ಬಹಳ ಕಾರ್ಣಿಕವಿದ್ದ ದೇವರಂತೆ. ದೇವಸ್ಥಾನದ ಹೆಸರು ಯಾರೂ ಎತ್ತುತ್ತಿರಲಿಲ್ಲವಂತೆ. ಅಷ್ಟು ಭಯವಿತ್ತು ಜನರಿಗೆ! ಈಗ ಅದೇನೂ ಇಲ್ಲ. ಅಮೃತಪಡಿ ನಂದಾದೀಪ ಇವೆರಡೂ ಇಲ್ಲದಿದ್ದರೆ ಕಾರ್ಣಿಕವೆಲ್ಲಿಂದ ಬರಬೇಕು? ಇಂತಹದೊಂದು ಸ್ಥಳ ಜಗತ್ತಿನಲ್ಲೇ ಇಲ್ಲ ಸ್ವಾಮಿ. ದೇವಸ್ಥಾನದ ಎದುರು ಕೆರೆಯೆಂದರೆ ಅಷ್ಟು ದೊಡ್ಡ ಕೆರೆ ಎಲ್ಲಿಯೂ ಇರಲಿಕ್ಕಿಲ್ಲ. ಕಟ್ಟಿದ ಕಲ್ಲುಗಳೆಲ್ಲವೂ ಜಾರಿಹೋಗಿ ಕೆಳಗೆ ಇಳಿಯಲಿಕ್ಕಿಲ್ಲವೆಂತಾಗಿದೆ. ಊರಿನ ಎಮ್ಮೆಗಳು ಬೇಸಿಗೆ ಕಾಲದಲ್ಲಿ ಬಂದು ಬಿದ್ದುಕೊಳ್ಳಲಿಕ್ಕಾಗಿಯದೆ. ಏನೋ ಸ್ವಪ್ನದಲ್ಲಿ ಬಂದು ಆಜ್ಞೆ ಕೊಟ್ಟಿದ್ದಾನೆ—ದೇವಸ್ಥಾನ ಜೀರ್ಣೋದ್ಧಾರವಾಗಬೇಕೆಂದು. ಹೊರಟಿದ್ದೇನೆ ಸ್ವಾಮಿ ನಾಲ್ಕು ಕಡೆಗೆ. ಕೊಟ್ಟಿದ್ದಾರೆ ಪುಣ್ಯಾತ್ಮರು. ಈ ಪುಣ್ಯ ಕೆಲಸದಲ್ಲಿ ನಿಮ್ಮಂಥವರು ಸಹಾಯ ಮಾಡಲೇ ಬೇಕು. ಅಷ್ಟೇ ಇಷ್ಟೇ ಎಂದು ನಿಯಮವಿಲ್ಲ. ನಿಮಗೆ ಶ್ರೀ ಲಕ್ಷ್ಮೀ ನಾರಾಯಣನು ಎಷ್ಟು ಪ್ರೇರೇಪಿಸುತ್ತಾನೋ ಅಷ್ಟು ಕೊಡಬಹುದು'' ಎನ್ನುತ್ತಾ ಅವರು ಪುಸ್ತಕವನ್ನೂ ಬೆಳ್ಳಿಯ ಪ್ರಸಾದದ ಹರಿವಾಣವನ್ನೂ ನನ್ನ ಮುಂದೆ ಇಟ್ಟರು. ಹೇಗೂ ಇವರ ಭಾಷಣವು ಮುಗಿಯಿತು ಎಂದು ಸಂತೋಷಪಟ್ಟು ನಾನು ಅವರ ಪುಸ್ತಕವನ್ನು ತೆಗೆದು ನೋಡಲಿಕ್ಕೆ ಆರಂಭಿಸಿದೆನು.

ಪ್ರಥಮ ಪುಟದಲ್ಲಿ "ಶ್ರೀ ಲಕ್ಷ್ಮೀನಾರಾಯಣ ಪ್ರಸನ್ನಃ" ಎಂದಿಷ್ಟೇ ಬರೆದಿತ್ತು. ೨ ನೇ ಪುಟದಲ್ಲಿ ರಿಟಾಯರ್ಡ್ ತಹಶಿಲ್ದಾರರೊಬ್ಬರ ಸರ್ಟಿಫಿಕೇಟು ಇತ್ತು. ಧರ್ಮಾಭಿಮಾನಿಗಳೆಲ್ಲರೂ ಈ ಪುಣ್ಯ ಕಾರ್ಯದಲ್ಲಿ ಶಕ್ತ್ಯಾನುಸಾರ ಸಹಕರಿಸಿ ಕುಂಭಕಾಶಿಯ ಶ್ರೀ. ಲಕ್ಷ್ಮೀ ನಾರಾಯಣನ ಮಹದನುಗ್ರಹಕ್ಕೆ ಪಾತ್ರರಾಗಬೇಕೆಂದು ವಿನಯಪೂರ್ವಕವಾಗಿ ಹಾರೈಸುತ್ತೇನೆ ಎಂದು ಅದರಲ್ಲಿ ಬರೆದಿತ್ತು. ೩ನೇ ಪುಟದಲ್ಲಿ ಈ ಪುಣ್ಯಕಾರ್ಯದಲ್ಲಿ ಶಕ್ತ್ಯಾನುಸಾರ ಸಹಕರಿಸಿ ಶ್ರೀ. ಲಕ್ಷ್ಮೀನಾರಾಯಣನ ಮಹದನುಗ್ರಹಕ್ಕೆ ಪಾತ್ರರಾದ ಧರ್ಮಾಭಿಮಾನಿಗಳ ಹೆಸರ ವಿಳಾಸ ಮತ್ತು ಅವರು ಶಕ್ತ್ಯಾನುಸಾರ ಮಾಡಿದ ಸಹಾಯದ ಸಂಖ್ಯೆಯು ಬರೆದಿತ್ತು. ೧. ಶ್ರೀ...... ಮಠದ ಶ್ರೀ. ಶ್ರೀಗಳವರು ೫೦-೦-೦. ಮೊದಲು ಇದು ೫ ೦-೦ ಎಂದು ಇದ್ದುದನ್ನು ಶತಪ್ರಯತ್ನ ಮಾಡಿ ೫೦ ಎಂದು ತಿದ್ದಿದ್ದು ಕಂಡುಬರುತ್ತಿತ್ತು. ೨. ಡಾಕ್ಟರ್ ಸುಬ್ಬರಾಯರು ೨೫-೦-೦. ಇದು ಮೊದಲು ೨-೦-೦ ಎಂದು ಇದ್ದುದನ್ನು ೨೫-೦-೦ ಎಂತ ತಿದ್ದಿದ್ದು ಸ್ಪಷ್ಟವಾಗಿತ್ತು. ೩. ಗೋಪಾಲಕೃಷ್ಣಾಚಾರ್ಯರು ೧೨-೦-೦. ಮೊದಲು ೨ ಮಾತ್ರ ಇದ್ದದ್ದು ಅದರ ಎಡಕ್ಕೆ ಸ್ಥಳವಿಲ್ಲದಿದ್ದಲ್ಲಿ ೧ನ್ನು ಬಲಾತ್ಕಾರದಿಂದ ಸೇರಿಸಿದ್ದು ಯಾರಿಗೂ ತಿಳಿದೀತು. ೪. ಸಾಹುಕಾರ ಸುಬ್ರಾಯರು ೨-೮-೦ ಇದರಲ್ಲಿ ರೂಪಾಯಿ ಸಂಖ್ಯೆ ಮೊದಲು ಸೊನ್ನೆ ಇದ್ದುದನ್ನು ತಿದ್ದಿ ೨ ಮಾಡಿದ್ದು ಎಂದು ಹೇಳಲು ಕಷ್ಟವಿರಲಿಲ್ಲ. ೫.... ಗುತ್ತಿನ ರಾಮಯ ಸೆಟ್ಟರು ೦-೮-೦ ಇದು ಮೊದಲು ೦-೨-೦ ಎಂತ ಇತ್ತು. ಹೀಗೆಲ್ಲಾ ಅಂಕೆಗಳನ್ನು ನಾನು ಜಾಗ್ರತೆಯಿಂದ ಪರೀಕ್ಷಿಸುವುದನ್ನು ನೋಡಿ ನಮ್ಮ ರಾಯರು ನನ್ನ ಹತ್ತಿರ ಬಂದು "ಅದೇನಾದರೂ ನಾನು ತಿದ್ದಿದ್ದಲ್ಲ ಸ್ವಾಮಿ. ಮೊದಲು ಅವರು ಅವರಷ್ಟಕ್ಕೆ ಒಂದು ಅಂಕೆ ಹಾಕಿಬಿಡುತ್ತಾರೆ. ಈ ಕಾರ್ಯದ ಮಹತ್ವವನ್ನು ವಿವರಿಸಿ ಒತ್ತಾಯ ಮಾಡಿದ ನಂತರ ಸ್ವಲ್ಪ ಔದಾರ್ಯ ಬಂದು ಅದನ್ನು ತಿದ್ದುತ್ತಾರೆ ಹೊರತು ನಾನು ಆ ಅಂಕೆಗಳನ್ನು ತಿದ್ದಿದ್ದೆಂದು ಯೋಚಿಸುತ್ತೀರೋ?" ಎಂದು ಗಟ್ಟಿಯಾಗಿ ನೆಗಾಡಿಬಿಟ್ಟರು. ಅದಕ್ಕೆ ನಾನು- "ಇಲ್ಲ. ಹಾಗೇನು ಇಲ್ಲ. ಯಾರು ತಿದ್ದಿದರೆ ನನಗೇನು?'' ಎಂದು ಪುಸ್ತಕಮುಚ್ಚಿ ಕೆಳಗೆ ಇಟ್ಟುಬಿಟ್ಟೆ. ಅಷ್ಟರಲ್ಲೇ ಅವರ ಭಾಷಣ ಪುನಃ ಪ್ರಾರಂಭವಾಯಿತು- 'ಅದೇನು ಸ್ವಾಮಿ ಹಾಗೆ ಹೇಳುತ್ತೀರಿ? ಇಷ್ಟೇ ತಾವು ಕೊಡಬೇಕೆಂದು ನಿಯಮವಿಲ್ಲ. ದೇವರು ಪ್ರೇರೇಪಿಸಿದಷ್ಟು ಕೊಡಬಹುದು. ಎಷ್ಟೋ ಜನ ಮಹಾನುಭಾವರು ಸಹಾಯ ಮಾಡಿದ್ದಾರೆ ನೀವೂ ಒಬ್ಬ ಬ್ರಾಹ್ಮಣ. ಅದರಲ್ಲಿಯೂ ಶುದ್ಧ ವೈದಿಕರು. ದೈವ ದೇವರೆಂದು ವಿಶ್ವಾಸವುಳ್ಳವರು. ಉದಾರಿಗಳೆಂದೂ ಕೇಳಿ ಇಲ್ಲಿಗೆ ಬಂದೆ. ತಾವೇ ಹೀಗೆ ಹೇಳಿಬಿಟ್ಟರೆ ನಾನು ಕೈಕೊಂಡ ಈ ಕಾರ್ಯ ಪೂರೈಸುವುದಾದರೂ ಹೇಗೆ? ನನ್ನ ಜೀವಮಾನದಲ್ಲಿ ದೇವಸ್ಥಾನ ಜೀರ್ಣೋದ್ಧಾರ ಮಾಡಿ ಬ್ರಹ್ಮಕಲಶವಾಗಬೇಕು.

ದಿನಕ್ಕೆ ಎರಡು ಸೇರು ಅಕ್ಕಿಯ ನೈವೇದ್ಯ ಮತ್ತು ಎರಡು ನಂದಾದೀಪ ಇಷ್ಟು ವ್ಯವಸ್ಥೆ ಮಾಡಬೇಕು. ಅದಕ್ಕೇನೂ ಕಷ್ಟವಿಲ್ಲ ಸ್ವಾಮಿ! ನನ್ನ ನಾಲ್ವತ್ತು ಮುಡಿ ಅಕ್ಕಿ ಉತ್ಪತ್ತಿಯಿರುವ ಆಸ್ತಿಯನ್ನು ದೇವರಿಗೆ ಧರ್ಮಸಾಧನ ಮಾಡಿಬಿಡುವುದೆಂದು ಸಂಕಲ್ಪ ಮಾಡಿರುತ್ತೇನೆ. ಆದಕ್ಕೆ ಐದು ಸಾವಿರ ಸಾಲವುಂಟು. ಅದನ್ನೊಂದು ತೀರಿಸಿ ಬಿಡಬೇಕು. ಪೂಜೆಯ ಕೆಲಸವು ನನ್ನ ಸಂತಾನ ಪಾರಂಪರ್ಯವಾಗಿ ನಡೆದು ಬರಬೇಕೆಂದು ನಿಶ್ಚಯಿಸಿದ್ದೇನೆ. ದೇವಸ್ಥಾನ ಕಟ್ಟಿಸುವಷ್ಟು ದೊಡ್ಡ ಪುಣ್ಯಕಾರ್ಯ ಭೂಲೋಕದಲ್ಲಿಯೇ ಇಲ್ಲ ಸ್ವಾಮಿ! ನೀವೇನಾದರೂ ಸಂಕೋಚಮಾಡಬಾರದು. ತಮ್ಮನ್ನು ಶ್ರೀ ದೇವರು ಉತ್ತರೋತ್ತರ ಅಭಿವೃದ್ಧಿಗೊಳಿಸಿ ನಡೆಯಿಸುತ್ತಾನೆ. ಒಂದು ಹತ್ತು ರೂಪಾಯಿಯಾದರೂ ನಿಮ್ಮ ದಿವ್ಯ ಹಸ್ತದಿಂದ ಆ ಪುಣ್ಯ ಕಾರ್ಯಕ್ಕೆ ಬೀಳಲಿ. ಶ್ರೀ. ಲಕ್ಷ್ಮೀ ನಾರಾಯಣನು..." ಇವರನ್ನು ಹೀಗೆಯೇ ಬಿಟ್ಟುಬಿಟ್ಟರೆ ಇವರ ಭಾಷಣ ಮುಗಿಯುವಂತಿಲ್ಲವೆಂದು ನೆನಸಿ ನಾನು ನನ್ನ ಭಾಷಣವನ್ನು ಪ್ರಾರಂಭಿಸಿದೆ. "ದೇವಸ್ಥಾನ ಜೀರ್ಣೋದ್ಧಾರ ಮಾಡುವುದು ಮಹಾ ಪುಣ್ಯಕಾರ್ಯವೆಂದು ತಾವು ಇಷ್ಟು ಪ್ರಯಾಸಪಟ್ಟು ನನಗೆ ವಿವರಿಸುವುದೇ ಬೇಡ. ಆದನ್ನು ತಿಳಿದೇ ನಾನು ನಮ್ಮ ಹಳ್ಳಿಯಲ್ಲಿರುವ ಶ್ರೀ. ಗೋಪಾಲಕೃಷ್ಣ ದೇವಸ್ಥಾನದ ಜೀರ್ಣೋದ್ಧಾರದ ಕಾರ್ಯವನ್ನು ಕೈಗೊಂಡದ್ದು. ನಮ್ಮ ಶ್ರೀ. ಗೋಪಾಲಕೃಷ್ಣ ದೇವಸ್ಥಾನವೆಂದರೆ ಅದು ನಳ ಚಕ್ರವರ್ತಿಯ ಕಾಲದ್ದು ಎಂದು ಸ್ಥಳಪುರಾಣವಿದೆ. ಶಿಲಾಶಾಸನದಲ್ಲಿಯೂ ಹಾಗೆಯೇ ಬರೆದದೆ. ವಿಗ್ರಹವೆಂದರೆ ಅತ್ಯಂತ ಮನೋಹರವಾದ್ದು. ಮುರಲೀಧರ ಕೃಷ್ಣ, ಎರಡೂ ಕಡೆಗಳಲ್ಲಿಯೂ ಗೋವುಗಳು. ವಿಗ್ರಹವನ್ನು ಮನುಷ್ಯರಾಗಲಿ ದೇವತೆಗಳಾಗಲಿ ಕೆತ್ತಿ ಮಾಡಿದ್ದಲ್ಲ ಸ್ವಾಮಿ! ಅನಾದಿ ವಿಗ್ರಹವೆಂದು ಇತಿಹಾಸವುಂಟು. ಕಾರ್ಣಿಕವೆಂದರೆ ಹೇಳುವುದೇನು? ಆ ದಾರಿಯಲ್ಲಿ ಜನರು ತಿರುಗಾಡುವುದನ್ನೇ ಬಿಟ್ಟುಬಿಟ್ಟಿದ್ದಾರೆ. ಈ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಬೇಕೆಂದು ಸಾಕ್ಷಾತ್ ಶ್ರೀ. ಕೃಷ್ಣ ಪರಮಾತ್ಮನೇ ಪ್ರತ್ಯಕ್ಷವಾಗಿ ನನಗೆ ಅಪ್ಪಣೆ ಕೊಡಿಸಿದ್ದಾನೆ. ಅನಂತರವೇ ಈ ಮಹತ್ಕಾರ್ಯಕ್ಕೆ ನಾನು ಕೈಹಾಕಿದ್ದು. ಆದರೆ ದೈವ ದೇವರ ಮೇಲೆ ವಿಶ್ವಾಸವಿಲ್ಲದೆ ನಮ್ಮಲ್ಲಿಯ ಜನರು ಇದನ್ನಾವುದನ್ನೂ ನಂಬುವುದಿಲ್ಲ. ಸ್ವಾಮಿ! ಧರ್ಮಾಭಿಮಾನಿಗಳೂ ಆಸ್ತಿಕ ಶಿರೋಮಣಿಗಳೂ ಆದ ತಾವೊಬ್ಬರಾದರೂ ನನಗೆ ಈ ದಿನ ಸಿಕ್ಕಿದ್ದು ಶ್ರೀ.ಕೃಷ್ಣನ ಅನುಗ್ರಹವೆಂಬುದರಲ್ಲಿ ಸಂದೇಹವಿಲ್ಲ. ಮುಂದಿನ ಯಾವ ಯೋಚನೆಯನ್ನೂ ಮಾಡದೆ ತಾವು ತಮ್ಮ ಹತ್ತಿರ ಇದ್ದ ದ್ರವ್ಯವನ್ನು ಈ ಪುಣ್ಯ ಕಾರ್ಯಕ್ಕೆ ಕೊಟ್ಟು ಕೃತಾರ್ಥರಾಗಬೇಕು. ಅದಕ್ಕಾಗಿ ನಾನೂ ಒಂದು ಪುಸ್ತಕ ತಯಾರಿಸಿದ್ದೇನೆ. ಒಂದುಕ್ಷಣ ತಾವು ಕುಳಿತುಕೊಳ್ಳಬೇಕೆಂದು" ಹೇಳಿ ನಾನು ಕೋಣೆಯೊಳಗೆ ಹೋದೆ. ಹಿಂತಿರುಗಿ ಬರದು ನೋಡುವಾಗ ಈ ಧರ್ಮಾಭಿಮಾನಿ ಅಲ್ಲಿರಲಿಲ್ಲ. ಹೆಬ್ಬಾಗಿಲುವರೆಗೆ ಹೋದೆ. ಅವರು ಕೊಡೆ ಬಗ್ಗಿಸಿಕೊಂಡು ಬಸ್ಸಾಫೀಸಿನ ಕಡೆಗೆ ಸೀದಾ ಹೋಗುತ್ತಿದ್ದರು. ಅವರ ಹೆಸರು ಗೊತ್ತಿಲ್ಲದ್ದರಿಂದ ಧರ್ಮಾಭಿಮಾನಿಗಳೇ! ಧರ್ಮಾಭಿಮಾನಿಗಳೇ! ಎಂದು ಗಟ್ಟಿಯಾಗಿ ಕರೆದೆ. ಧರ್ಮಾಭಿಮಾನಿಗಳು ಹಿಂದೆ ನೋಡದೆ ಮುಂದೆ ನಡದೇ ಬಿಟ್ಟರು. ಎಂತಹ ಅವಸ್ಥೆ ನೋಡಿ!

---

## ನೀರ ಮೇಲೆ ಹೊಗೆ

**ಉ:**— ಚಳಿಗಾಲದಲ್ಲಿ ನೀರ ಮೇಲೇಕೆ ಹೊಗೆಯು ಕಾಣುತ್ತದೆ? ಹೊಗೆ ಏಳಲು ಕಾರಣವೇನು?

**ವಿದ್ಯಾರ್ಥಿ:** – ತ್ರೇತಾಯುಗದಲ್ಲಿ ಲಂಕೆಯನ್ನು ಸುಟ್ಟ ಹನುಮಂತನು ತನ್ನ ಬಾಲದ ಬೆಂಕಿಯನ್ನು ನೀರಿನಲ್ಲಿ ಆದ್ದಿದ್ದನಷ್ಟೆ? ಅದರ ಶಾಖದಿಂದ ಚಳಿಗಾಲದಲ್ಲಿ ಕೂಡಾ ಜಲರಾಶಿಯಿಂದ ಹೊಗೆ ಏಳುತ್ತದೆ.

੦ ੦ ੦ ੦

## ಅಪ್ಪ ಬರಲಿಲ್ಲ

**ತಾಯಿ:**— ಮಗೂ, ಅಪ್ಪ ಬಂದರೆ? ಜಗಲಿಯಲ್ಲಿ ಅವರು ಮಾತಾಡುವಂತೆ ನನಗೆ ಕೇಳಿಸಿತು.

**ಮಗು:** — ಇಲ್ಲಮ್ಮ, ಅಪ್ಪ ಬರಲಿಲ್ಲ, ಜಗಲಿಯಲ್ಲಿ ನಮ್ಮ ನಾಯಿ ಬೊಗಳುತ್ತದೆ.

੦ ੦ ੦ ੦

# ವಾರದ ಪಂಚಾಂಗ

## ಬಹುಧಾನ್ಯ ಸಂ| ಆಷಾಢ ಕೃಷ್ಣಪಕ್ಷ ಗ್ರೀಷ್ಮರ್ತುಃ

**ಕರ್ಕಟಕ (ಆಟಿ) ೧ರಿಂದ೭ರ ವರೆಗೆ. ಮಹಾನಕ್ಷತ್ರ ಪುನರ್ವಸು – ಪುಷ್ಯ**

### ಆರ್ಯಭಟ ವಾಕ್ಯಕರಣರೀತ್ಯಾ ನಿತ್ಯಪಂಚಾಂಗಂ

| ತಾರೀಕು | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 17 | ೫ | ರ ೫೩| | ಪೂಭಾ೬೦ | ಸೌ ೧೧ | ಕೌ೨೩ | ವಿ೧೬ | ಅ೪೧ | ವಿಷಾನೆಚ೪೬ ದಕ್ಷಿಣಾಯನಾರಂಭ ಪ್ಯ೧ಕು೧೬ |
| 18 | ೬ | ಚ ೫೩ | ಪೂಭಾ೧||| | ಶೋ ೯ | ಗ೨೩| | ವಿ೨೬| | ಅ೫೦||| | ಆ್ಲ೪ಬು೩೦ |
| 19 | ೭ | ಕು ೫೧| | ಉಭಾ೩ | ಅ್ತ ೬ | ಭ೨೨| | ವಿ೩೩ | ಅ೫೭ | ಪುಷ್ಯಾ ಕರ್ಕಃ೪೭|| ಹು೧ ಶು೧೦ ಪ್ರದೋಷಃ |
| 20 | ೮ | ಬು ೪೮|| | ರೆ೩ | ಸ್ಕು೨ ಉ್ಪ೫೫ | ಬಾ೨೦ | ವಿ೫೨ | ಅ ಶೆ೧ ಅ೪೪| | ಮೆ.ಚ೩ ಮ೧ಸಿಂ.ಬು೫೫ |
| 21 | ೯ | ಗು ೪೫|| | ಅ್ವ೧||| ಉ್ಪ೫೭||| | ಶೂ೫೧| | ತೈ೧೬||| | ವಿ೨೫ | ಅ೪೮| | |
| 22 | ೧೦ | ಶು ೪೦| | ಕೃ೫೭ | ಗಂ೪೪||| | ವ೧೨|| | ವಿ೨೮| | ಅ೫೧| | ವೃಷೇಚ೧೪ಪ್ಯ೨ಕು೩೨ ಹು೨ಶ೩ |
| 23 | ೧೧ | ಶ ೩೪||| | ರೋ೫೩" | ವೃ೩೮ | ಬ೭||| | ವಿ೩೪||| | ಅ೪೪||| | ಪ್ಯ೨ರ೧೭||ಮು೨ಬು೪೩ ಸರ್ವೈಕಾ. |

### ಕೇತಕೀ ದೃಕ್ಸಿದ್ಧರೀತ್ಯಾ ನಿತ್ಯಪಂಚಾಂಗಂ

| ತಾರೀಕು | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 17 | ೫ | ರ ೫೮ | ಶ್ರ೨ | ಸೌ೧೨||| | ಕೌ೨೬| | ವಿ೧೮|| | ಅ೪೪| | ವಿಷಾಚ೪೯||ಪ್ಯ೧ಕ೫೧೧ |
| 18 | ೬ | ಚ ೫೯|| | ಪೂಭಾ೫||| | ಶೋ೧೨ | ಗಂ೨೮||| | ವಿ೩೧ | ಅ೫೬| | ಬಾಲತಿಲಕಜಯಂತೀ |
| 19 | ೭ | ಕು ೫೯|| | ಉಭಾ೯|| | ಅ್ತ೧೦||| | ಭ೨೯|| | ವಿ೩೯|| | ಅ. ಶೆ.|| | ಪುಷ್ಯೇ ಕರ್ಕ೩೯ಆ್ಲ೪ಬು೨ ಪೂ೧ಶು೪೧ |
| 20 | ೮ | ಬು ೫೮ | ರೆ೦ | ಸ್ಕು೪೮ | ಬಾ೨೮||| | ವಿ೦ | ಅ೪ಅ೫೨| | ಮೇಷೇಚ೧೦ |
| 21 | ೯ | ಗು ೫೪|| | ಅ್ವ೧೦ | ಧೃ೩||| ಉ್ಪ೫೪||| | ತೈ೨೬| | ವಿ|ವಿ೩೩|| | ಅ೫೬ ||| | ಸಿಂಹೆಬುಧಃ೨೩ |
| 22 | ೧೦ | ಶು ೪೯||| | ಭ೮| | ಗ೫೧||| | ಮ೨೨| | ವಿ೩೬||| | ಅ.ಶೆ||| ಅ೫೯| | ವೃಷೇಚ೨೨||ಪ್ಯ೨ಕು ೨೦ಪೂ೨ಶು೩೫ |
| 23 | ೧೧ | ಶ ೪೩ | ಕೃ೫ ಉ್ಪ೫೫ | ವೃ೪೩||| | ಬ೧೬|| | ವಿ೪೧||| | ಅಶೆ೩| ಅ೫೨||| | ಪ್ಯ೨ರ೯ಮು೨ಬು೫೪ ವೃ.ಪ್ರ.೫೫||ಸರ್ವೇ೧೧ |

# ರಾಶಿಫಲ



ತಾ. ೧೭-೭-೧೯೬೮ರಿಂದ
ತಾ. ೨೩-೭-೧೯೬೮ರ ವರೆಗೆ

**ಮೇಷ:-**

ಈ ರಾಶಿಯವರಿಗೆ ಈ ವಾರವು ಶರೀರಪ್ರಕೃತಿಯ ದೃಷ್ಟಿಯಿಂದಲೂ ವ್ಯವಹಾರದೃಷ್ಟಿಯಿಂದಲೂ ಸ್ವಲ್ಪ ಕೆಟ್ಟದ್ದಿರುವುದು. ಆದ ಕಾರಣ ದೇಹದಲ್ಲಿ ಸ್ವಲ್ಪ ಆಲಸ್ಯವೂ, ಹೊಟ್ಟೆ ನೋವೂ ಅಲ್ಲದೆ ಶತ್ರುಗಳಿಂದ ಮಾನ ಹಾನಿಯೂ ಕೂಡಾ ಆಗುವ ಸಂಭವವಿದೆ. ಮತ್ತು ಮಾತುಮಾತಿನಿಂದಾಗಿ ಕಲಹವು ಹುಟ್ಟಿ ತದ್ರೂಪದಿಂದ ಹಣ ಖರ್ಚಾಗುವುದು. ಆದ ಕಾರಣ ಮಿತಭಾಷಿಯಾದಷ್ಟೂ ಒಳ್ಳಿತು. ಅನಿವಾರ್ಯವಾಗಿ ದುಃಖದಾಯಕಗಳಾದ ಕೆಲವು ಕಾರ್ಯಗಳು ಆಗಿಹೋಗುವವು. ಅನಿಷ್ಟಸ್ಥಾನಗತರಾದ ರವ್ಯಾದಿ ಪಂಚಪಾಪಿ ಗ್ರಹರೇ ಇವಕ್ಕೆಲ್ಲಾ ಕಾರಣಭೂತರಾಗಿರುವರು. ಹೇಗೆ ಪಾಪಿಗ್ರಹರೆಲ್ಲರೂ ಅನಿಷ್ಟಸ್ಥಾನವನ್ನು ಹೊಂದಿರುವರೋ ಅಂತೆಯೇ ಸೌಮ್ಯ ಗ್ರಹರಾದ ಬುಧಾದಿ ಮೂವರು ಗ್ರಹರೂ ಶುಭಸ್ಥಾನವನ್ನು ಹೊಂದಿರುವರು. ಇದರಿಂದ ಈ ಜನರಿಗೆ ದೈವಾನುಗ್ರಹವಿದೆಯೆಂದು ನಿಶ್ಚಿತವಾಗುತ್ತದೆ. ಶುಭವನ್ನುಂಟುಮಾಡತಕ್ಕ ಈ ಶುಭಗ್ರಹರಿಂದಾಗಿ ಪೂರ್ವೋಕ್ತ ಅನಿಷ್ಟಗಳು ಆದಷ್ಟು ಕಡಿಮೆಯಾಗಿ ಪರಿಣಮಿಸುವುವು. ತಾ ೨೦, ೨೧, ೨೨ ಈ ದಿನಗಳು ಉತ್ತಮವಿರುವುವು. ಒಟ್ಟಾರೆ ಹೇಳುವುದಾದರೆ ಆಯಕ್ಕಿಂತ ವ್ಯಯವೇ ಹೆಚ್ಚಾಗುವುದು—

**ವೃಷಭ:-**

ಈ ವಾರದಲ್ಲಿ ನೀವು ತಿಳಿದೂ ತಿಳಿದೂ ಕೆಟ್ಟ ಕೆಲಸವನ್ನು ಮಾಡುವಿರಿ. ನಿಮ್ಮ ದುಶ್ಚಾರಿತ್ರ್ಯದಿಂದಾಗಿ ನಿಮಗೆ ಯಾವಾಗ ಏನು ಕೇಡು ಸಂಭವಿಸುವದೋ ಎಂಬ ಶಂಕೆಯು ನಿಮ್ಮನ್ನು ಪದೇ ಪದೇ ಬಾಧಿಸುತ್ತಿರುವುದು. ವ್ಯವಹಾರ ವಿಷಯದಲ್ಲಿ ಅಧಿಕಾರಿಗಳಿಂದ ಸ್ವಲ್ಪ ಭಯವಿದೆ. ತಾ. ೨೦, ೨೧, ೨೨ ರಲ್ಲು ದೇಹಾರೋಗ್ಯವು ಕೆಡುವುದು. ಅದಕ್ಕಾಗಿ ಸ್ವಲ್ಪ ಹಣ ವ್ಯಯಿಸಬೇಕಾಗುವುದು. ಅನುಕೂಲರಾದ ಗುರು ಶುಕ್ರರು ಪರಸ್ಪರ ಸಪ್ತಮ ಸ್ಥಾನವನ್ನು ಹೊಂದಿರುವುದರಿಂದಲೂ ತಾ. ೧೭, ೧೮, ೧೯ ಮತ್ತು ೨೩ ರಲ್ಲು ಚಂದ್ರನು ಅನುಕೂಲನಾಗಿರುವುದರಿಂದಲೂ ನಿಮ್ಮ ವೈರಿಗಳೂ ಕೂಡ ವೈರವನ್ನು ಬಿಟ್ಟು ಮಿತ್ರತ್ವವನ್ನು ಬೆಳೆಸುವರು. ಹೊಸ ಜನರ ಪರಿಚಯವಾಗುವುದು. ನಾಲ್ಕು ಜನರಿಂದ ಗೌರವವನ್ನು ಪಡೆಯುವಿರಿ. ಆರಂಭಿಸಿದ ಕಾರ್ಯವು ಜಯಶೀಲವಾಗಿ ಕೊನೆಗೊಳ್ಳುವುದು. ಮಕ್ಕಳಿಂದಾಗಿ ಧನವನ್ನು ಹೊಂದುವಿರಿ. ಅಲ್ಲದೆ ಪರಸ್ತ್ರೀಸಂಬಂಧವಾದ ಧನವೂ ಕಳ್ಳರ ಧನವೂ ಕೂಡ ಸಿಗುವ ಯೋಗವಿದೆ—

**ಮಿಥುನ:-**

ಈ ರಾಶಿಯಲ್ಲಿ ಹುಟ್ಟಿದವರು ಧರ್ಮದಲ್ಲಿ ಹೆಚ್ಚಾದ ಆಸಕ್ತಿಯುಳ್ಳವರಾಗಿದ್ದು ಧರ್ಮಕರ್ಮವನ್ನೇ ಮಾಡುವರು. ಇದರಿಂದ ಸ್ಥಾನಮಾನಗಳನ್ನು ಹೊಂದುವರು. ಶತ್ರುಗಳ ನಾಶದಿಂದ ಮನಸ್ಸಿಗೆ ಆನಂದವು ಉಂಟಾಗುವುದು. ಪರರಿಗೆ ನೋಡುವಾಗ ಮುಖವಿಕಾರದಿಂದಾಗಲಿ, ಕಾರ್ಯದಿಂದಾಗಲಿ ಸುಖಿಯಂತೆ ತೋರಿಸಿಕೊಳ್ಳುವರು. ಆದರೂ ತಾನು ಮುಂಚೆ ಮಾಡಿದ ಒಂದು ವಂಚನೆಯ ಕೆಲಸದಿಂದ ಅಂತರಂಗದಲ್ಲೊಂದು ಭೀತಿಯು ಇದ್ದೇ ಇರುವುದು. ಒಂದೆಡೆ ರಾಜಕಾರಣದಲ್ಲಿ ಎಲ್ಲಿ ಅಪರಾಧಿಯಾಗುವೆನೋ ಎಂಬ ಭಯ. ಇನ್ನೊಂದೆಡೆ ಶತ್ರುಗಳ ಬಲೆಗೆ ಸಿಗುವೆನೋ ಎಂಬ ಭೀತಿ. ಮತ್ತೊಂದೆಡೆ ಕಳ್ಳರ ಹೆದರಿಕೆ. ಇವುಗಳಿಂದಾಗಿ ಮನಸ್ಸಿಗೆ ಶಾಂತಿಯಿಲ್ಲ. ಈ ಎಲ್ಲಾ ಯೋಚನೆಗಳಿಂದ ಚೆನ್ನಾಗಿ ನಿದ್ದೆ ಬೀಳದೆ ಉಷ್ಣಪಿತ್ಥ ಸಂಬಂಧವಾದ ರೋಗವು ತಲೆದೋರುವುದು. ತಾ. ೧೭ ರಂದು ಸ್ವಲ್ಪ ಹೊಟ್ಟೆನೋವೂ ಕಂಡುಬಂದೀತು. ತಾ. ೧೮ ರಿಂದ ೨೨ರ ವರೆಗಿನ ದಿನಗಳು ಶುಭಕಾರಕಗಳಾಗಿವೆ—

**ಕರ್ಕಾಟಕ:-**

"ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಂ" ಅಂದರೆ ಸುಖಾನುಭವದ ನಂತರ ದುಃಖಾನುಭವವೂ, ದುಃಖಾನುಭವದ ನಂತರ ಸುಖಾನುಭವವೂ ರಾತ್ರಿ ಹಗಲಿನಂತೆ ಮನುಷ್ಯರಿಗೆ ಆಗಾಗ ಪರಿವರ್ತನವಾಗುತ್ತಲೇ ಇರುವುದು. ಹಾಗೆಯೇ ಈಗ ಈ ರಾಶಿಯವರಿಗೆ ದುಃಖವನ್ನು ಅನುಭವಿಸುವ ಕಾಲವು ಬಂದೊದಗಿದೆ ಎಂದರೆ ತಪ್ಪಾಗದು. ಏಕೆಂದರೆ ಶುಕ್ರ ಕೇತು

ಗಳು ಹೊರತಾಗಿ ಮಿಕ್ಕುಳಿದ ಎಲ್ಲಾ ಗ್ರಹರು ಅನಿಷ್ಟ ಸ್ಥಾನವನ್ನೇ ಆಶ್ರಯಿಸಿರುವರು. ಆದಕಾರಣ ಮನಸ್ಸು ಬಹಳ ಚಂಚಲವಾಗಿದ್ದು ಒಂದರೆಕ್ಷಣವೂ ನಿಂತಲ್ಲಿ ನಿಲ್ಲದು. ಈ ಕಾರಣದಿಂದಲೂ ಶತ್ರುಭಯದಿಂದಲೂ ಆಯಾಸ ಮತ್ತು ಧನವ್ಯಯವಾಗುವುದು. ದೈವಾನು ಗ್ರಹವು ಲೇಶವೂ ಇಲ್ಲದ ಕಾರಣ ನಿರ್ಯಾಣ ಸ್ಥಾನಗತ ನಾದ ಗುರುವಿನಿಂದಾಗಿ ವ್ಯಾಧಿ ಬಂಧನಗಳು ಸಂಭವಿಸ ಲಿವೆ. ಈ ಮನೋವ್ಯಥೆಯಿಂದಾಗಿ ಆಹಾರ ನಿದ್ರೆಗಳು ಕಾಲ ಕಾಲಕ್ಕೆ ಆಗದೆ ಆರೋಗ್ಯವೇ ಕೆಟ್ಟು ಹೋಗಿ ಜೀವಿತಾಂತ್ಯವನ್ನೇ ತಂದು ಕೊಡುವುದೋ ಎಂಬಲ್ಲಿಯ ವರೆಗೆ ರೋಗವು ಪರಿಣಮಿಸುವುದು. ತಾ. ೨೦ ರಿಂದ ೨೩ರ ವರೆಗೆ ಚಂದ್ರನು ಸ್ವಲ್ಪಮಟ್ಟಿಗೆ ಅನುಕೂಲ ನಾಗಿರುವನು. ಈ ಅನಿಷ್ಟ ಗ್ರಹರ ಪೀಡಾನಿವೃತ್ತಿಗೆ ತಕ್ಕ ಚಿಕಿತ್ಸೆಯನ್ನು ಆರೋಗ್ಯಭಾಗ್ಯಾಕಾಂಕ್ಷಿಗಳು ಮಾಡುವುದೊಳ್ಳಿತು—

**ಸಿಂಹ:**—

ಈ ರಾಶಿಯ ಜನರು ಹಿಂದಿನ ರಾಶಿಯವರಿಗಿಂತ ಹೆಚ್ಚಾಗಿ ಕಷ್ಟವನ್ನನುಭವಿಸಲಿಕ್ಕಿರುವರು. ಕಾರಣ, ಸುರಗುರುವಾದ ಬೃಹಸ್ಪತಿಯೂ, ದೈತ್ಯಗುರುವಾದ ಶುಕ್ರನೂ ಇವರಿಗೆ ಇಷ್ಟ ಸ್ಥಾನದಲ್ಲಿದ್ದು ಹಿತಚಿಂತಕ ರಾಗಿದ್ದರೂ ಶುಕ್ರನು ಶನಿಯಿಂದ ವಿದ್ಧನಾದ ಪ್ರಯುಕ್ತ ಒಳ್ಳೇದನ್ನು ಮಾಡಲು ಸಮರ್ಥನಾಗುವುದಿಲ್ಲ. ಇನ್ನಿತರ ಗ್ರಹರೆಲ್ಲರೂ ವಿಮುಖರಾಗಿರುವುದರಿಂದ ವ್ಯಾಪಾರ ವ್ಯವಹಾರಗಳಲ್ಲಿ ನಷ್ಟವೇ ಹೆಚ್ಚಾಗುವುದು. ಶತ್ರು ಗಳಿಂದ ಆಗಾಗ ಪೀಡೆಯು ತಪ್ಪಿದ್ದಲ್ಲ. ಬಂಧುಗಳ ಲ್ಲಿಯೂ ಆಪ್ತರಲ್ಲಿಯೂ ಕಲಹವುಂಟಾಗಿ ಅವಮಾನ ಹೊಂದುವರು. ತನ್ನ ಸ್ತ್ರೀ ಮತ್ತು ಮಕ್ಕಳುಗಳಿಂದ ವಿಯೋಗವುಂಟಾಗುವುದು. ಕಣ್ಣು ನೋವು ಮಾತ್ರ ವಲ್ಲದೆ ಅತ್ಯಂತ ಗಂಡಾಂತರವೊದಗಲಿದೆ. ಸತ್ಕರ್ಮ ಸದ್ಧರ್ಮ ಸಚ್ಚರಿತ್ರರಿಗೆ ಈ ಪೂರ್ವೋಕ್ತಗಳಾದ ದೋಷಗಳು ಸ್ವಲ್ಪ ಕಡಿಮೆಯಾಗುವುವು. ತಾ. ೧೭ ೨೩ ರಲ್ಲಿ ಧನ ಲಾಭ, ಕಾರ್ಯಜಯ—

**ಕನ್ಯಾ:**—

ಗುರುಶನಿಗಳು ಹೊರತಾಗಿ ಇತರ ಎಲ್ಲಾ ಗ್ರಹರೂ ಈ ವಾರದಲ್ಲಿ ಈ ರಾಶಿಯವರಿಗೆ ಅನುಕೂಲರಾಗಿರುವರು. ಆದಕಾರಣದಿಂದಲೇ ಧನಸಂಬಂಧವಾದ ಎಲ್ಲಾ ಕಾರ್ಯ ಗಳಲ್ಲೂ ಲಾಭವೇ. ಉದ್ಯೋಗಿಗಳಿಗೆ ಉನ್ನತ ಸ್ಥಾನವು ಸಿಗುವದು. ಆರಂಭಿಸಿದ ಕಾರ್ಯವು ನಿರ್ವಿಘ್ನ ದಿಂದ ತಮ್ಮಂತೆಯೇ ಕೊನೆಹೊಂದುವುದು. ಧನ ವಸನಾದಿಗಳು ಅಕಸ್ಮಾತ್ತಾಗಿ ದೊರೆಯುತ್ತವೆ. ಮಕ್ಕಳು ಮರಿಗಳಿಂದ ಕೂಡಿಕೊಂಡಿರತಕ್ಕ ಕುಟುಂಬವು ಸುಖ ದಿಂದ ನಲಿದಾಡಿಕೊಂಡಿರುವುದು. ಎಲ್ಲಾ ಭಾಗ ದಲ್ಲಿಯೂ ತೃಪ್ತಿಯಿರುವ ಕಾರಣ ಇವರು ಸುಖಿಗಳಾಗಿ ರುವರು. ಇಷ್ಟೆಲ್ಲಾ ಭಾಗ್ಯವಿದ್ದರೂ ಅನಿರ್ವಾಚ್ಯ ವಾದ ಒಂದು ಚಿಂತೆಯು ಮನಸ್ಸಿನಲ್ಲಿ ಮನೆಮಾಡಿ ಕೊಂಡಿರುವುದು. ತಾ. ೨೦, ೨೧, ೨೨ ರಲ್ಲಿ ಸ್ವಲ್ಪ ಜಾಗ್ರತೆಯಿಂದಿರಬೇಕು—

**ತುಲಾ:**—

'ದುಃಖಸ್ಯಾನಂತರಂ ಸುಖಂ'' ಎಂಬ ವಾಕ್ಯವು ಈ ರಾಶಿಯವರಿಗೆ ಸಂಪೂರ್ಣ ಅನ್ವಯಿಸುತ್ತದೆ. ಏಕೆಂದರೆ ರವ್ಯಾದಿ ಸಪ್ತಗ್ರಹರೂ ಇವರಿಗೆ ಶುಭ ಸ್ಥಾನದಲ್ಲಿದ್ದು ಮಂಗಳವನ್ನೇ ಮಾಡುತ್ತಿರುವರು. ಆದುದರಿಂದ ಈ ವಾರದಲ್ಲಿ ಇವರು ಕೈಗೊಂಡ ಪ್ರತಿಯೊಂದ ಕಾರ್ಯವೂ ಯಶಸ್ವಿಯಾಗಿ ಕೊನೆಗೊಳ್ಳುವುದು. ವ್ಯಾಪಾರದಲ್ಲೂ, ದ್ಯೂತಾದಿಗಳಲ್ಲೂ ಇವರಿಗೆ ಲಾಭವಾಗುವುದು. ಶತ್ರು ಗಳು ಮಿತ್ರರಾಗಿ ಪರಿಣಮಿಸುವರು. ಕುಟುಂಬವೆಲ್ಲವೂ ಸುಖದಿಂದಿದ್ದು ಶುಭಕೆಲಸಗಳು ಹೆಚ್ಚಾಗಿ ನಡೆಯು ತ್ತವೆ. ದೇಹಾನಾರೋಗ್ಯವು ತೊಲಗಿಹೋಗಿ ಆರೋಗ್ಯ ಭಾಗ್ಯ ಪ್ರಾಪ್ತಿಯಾಗುತ್ತದೆ. ಎಲ್ಲಾ ಜನರಿಂದಲೂ ಮಾನಿಸಲ್ಪಡುವರು. ಹೆಚ್ಚೇಕೆ, ಎಲ್ಲಾ ವಿಧದಲ್ಲೂ ನಿಶ್ಚಿಂತರಾಗಿರುವ ಕಾರಣ ಧೀರ ಲಲಿತರಂತೆ ವಿಹರಿಸು ವರು. ಈ ವಾರದಲ್ಲಿ ತಾ. ೧೮ ರಿಂದ ೨೨ ತನಕ ಅತ್ಯು ತ್ತಮವಿರುವುದು. —

**ವೃಶ್ಚಿಕ:**—

ಈ ರಾಶಿಯು ತುಲಾರಾಶಿಗೆ ಸಂಪೂರ್ಣ ವಿರೋಧ ವಿರುವದು. ಅಂದರೆ ಎಲ್ಲಾ ಗ್ರಹರೂ ಅನಿಷ್ಟಸ್ಥಾನ ವನ್ನೇ ಆಶ್ರೈಸಿರುವರು. ತಾ. ೨೧-೨೨-೨೩ರಲ್ಲಿ ಚಂದ್ರ ನೊಬ್ಬನು ಮಾತ್ರ ಇಷ್ಟಸ್ಥಾನದಲ್ಲಿರುವನು. ಆದ ಕಾರಣ ಭಯ, ಬಾಂಧವರಲ್ಲಿ ಕಲಹ, ಸೇವಕರು, ಪುತ್ರರು ಇವರಿಂದ ದೂರವಾಗುವಿಕೆ, ವಿಷ ತಕ್ಕೊಳ್ಳ ಲೆಂಪರೂ ಕೈಯಲ್ಲೊಂದೂ ಕಾಸಿಲ್ಲದಿರುವಿಕೆ, ದೇಹಾ ನಾರೋಗ್ಯ, ನಾನಾ ರೀತಿಯ ಪೀಡೆ, ಶತ್ರುಗಳಿಂದ ಪರಾಜಯ, ಎಲ್ಲೆಲ್ಲಿಯೂ ಮಾನಹಾನಿ; ಎಲ್ಲರ ಕೂಡೆ ಜಗಳ ಇತ್ಯಾದಿಗಳಿಂದಾಗಿ ಚಿಂತಾಕುಲದಿಂದ

ದುಃಖಾಂಬುಧಿಯಲ್ಲಿ ತೇಲಾಡುವರು. ಆದಕಾರಣ ಈ ನವಗ್ರಹರ ತೃಪ್ತಿಗೋಸ್ಕರ ತಕ್ಕ ಪ್ರಾಯಶ್ಚಿತ್ತವನ್ನು ಮಾಡಿದರೆ ಈ ಎಲ್ಲಾ ದೋಷಗಳು ಸ್ವಲ್ಪಮಟ್ಟಿಗೆ ಕಡಿಮೆಯಾಗುವವು. ಹೇಗೆಂದರೆ, 'ಜನ್ಮಾಂತರಕೃತಂ ಪಾಪಂ ವ್ಯಾಧಿರೂಪೇಣ ಜಾಯತೇ । ತಚ್ಛಾಂತಿರೌಷಧೈರ್ದಾನೈರ್ಜಪಹೋಮಕ್ರಿಯಾದಿಭಿಃ ||' ಅಂದರೆ ಪೂರ್ವಜನ್ಮದಲ್ಲಿ ಮಾಡಿದ ಪಾಪವಿಶೇಷವೇ ಈ ಜನ್ಮದಲ್ಲಿ ವ್ಯಾಧಿರೂಪದಿಂದ ಮನುಷ್ಯನನ್ನು ಪೀಡಿಸುವುದು. ವ್ಯಾಧಿ ನಿವಾರಣೆಯಾಗಲೋಸುಗ ಈ ಗ್ರಹರ ಪ್ರೀತ್ಯರ್ಥವಾಗಿ ಮಾಡತಕ್ಕ ಸತ್ಕರ್ಮಗಳಿಂದ ಪಾಪವು ಪರಿಹಾರವಾಗಿ ತದ್ರೂಪವಾದ ವ್ಯಾಧಿಯೂ ತೊಲಗುವುದು. ಆದಕಾರಣ ಈ ರಾಶಿಯವರು ತಕ್ಕ ಪ್ರತಿಕ್ರಿಯೆಯನ್ನು ಮಾಡುವುದು ಲೇಸು—

**ಧನು—**

ಕಾರ್ಯಗಳನ್ನು ಎಷ್ಟು ಜಾಗರೂಕರಾಗಿ ಮಾಡಿದರೂ ಅದು ವಿಪರೀತದಲ್ಲಿ ಪರ್ಯವಸಾನ ಹೊಂದುವುದು. ಶತ್ರುಗಳು ಅನೇಕ ರೀತಿಯಿಂದ ಪೀಡಿಸುವರು. ಆಪ್ತ ಮಿತ್ರರಲ್ಲೂ ಸ್ವಸ್ತ್ರೀಯಲ್ಲೂ ಕಲಹವಾಗಿ ಎಲ್ಲರೂ ದೂರ ತೊಲಗುವರು. ಆದರೂ ಕುಟಿಲ ಬುದ್ಧಿಯು ಇವರನ್ನು ಯಾವ ಕೆಲಸ ಮಾಡಲಿಕ್ಕೂ ಪ್ರೇರೇಪಿಸುವುದು. ಹಣದ ಅಡಚಣೆಯಿಂದಾಗಿ ಎಲ್ಲಿಯೂ ಮಾನರಕ್ಷಣೆಯೇ ಬಹಳ ಕಷ್ಟವಾಗಿ ಪರಿಣಮಿಸುವದು. ಇದರಿಂದ ಮನಶ್ಶಾಂತಿಯು ಎಳ್ಳಷ್ಟೂ ಇಲ್ಲವು. ಆದರೂ ಬುಧ ಶುಕ್ರರು ಇವರ ಮೇಲೆ ತಮ್ಮ ಕೃಪಾದೃಷ್ಟಿಯನ್ನಿಟ್ಟಿರುವುದರಿಂದ ಆಪತ್ತಿನಲ್ಲೊಂದು ಸಂಪತ್ತೆಂಬಂತೆ ಎಲ್ಲವೂ ಸ್ವಲ್ಪ ಮಟ್ಟಿಗೆ ಶಾಂತವಾಗಿ ಪರಿಣಮಿಸುವುದು. ತಾ. ೧೭, ೨೨, ರಲ್ಲಿ ಆರೋಗ್ಯವೂ ಕೆಡಲಿರುವುದು—

**ಮಕರ—**

ಈ ವಾರದಲ್ಲಿ ಈ ರಾಶಿಯವರಿಗೆ ಇಷ್ಟಾನಿಷ್ಟಗಳೆರಡೂ ಸಮಾನಗಳಾಗಿರುವುದರಿಂದ ಉದಾಸೀನವಾಗಿರುವುದು. ಅನುಕೂಲರಾಗಿರುವ ಗುರು, ಶುಕ್ರ, ಶನಿ, ರಾಹುಗಳು ಖರ್ಚಿನ ಮಟ್ಟಿಗೆ ಹಣವನ್ನೊದಗಿಸಿ ಕೊಡುವರಲ್ಲದೆ ಶತ್ರುಗಳ ಪೀಡೆಯನ್ನು ನಿವಾರಿಸುವರು. ನೂತನ ಗೃಹದ ಪ್ರವೇಶವನ್ನು ಮಾಡಿಸುವರು. ಪ್ರತಿಕೂಲ ಗ್ರಹರಿಂದಾಗಿ ಯಾವಾಗಲೂ ಮನುಸ್ಸು ಚಂಚಲವಾಗುವುದು. ದೇಶವನ್ನು ಸುತ್ತಬೇಕಾದ ಪ್ರಸಂಗ ಕೂಡಾ ಬರುವುದು. ತನ್ನ ಸ್ತ್ರೀಯೇ ಕಲಹವನ್ನು ಮಾಡುವಳು. ಇತರ ಜಾತಿಯವರಲ್ಲಿ ವಾದವಿವಾದದಿಂದಾಗಿ ಕಲಹವುಂಟಾಗುವುದು. ಹೀಗಾಗಿ ಯಾವಾಗಲೂ ಚಿಂತೆಯು ತಪ್ಪಿರುವುದಿಲ್ಲೆಂದೇ ಹೇಳಬಹುದು. ತಾ. ೧೬, ೧೯ ಸ್ವಲ್ಪ ಅನುಕೂಲ, ವಸ್ತ್ರಧನಲಾಭ—

**ಕುಂಭ--**

ಷಷ್ಠಸ್ಥಾನಗತರಾದ ರವಿ ಕುಜ ಬುಧರು ಅನುಕೂಲರಾಗಿದ್ದು ಒಳ್ಳೇದು ಮಾಡಲು ಸಮರ್ಥರಿದ್ದು ಒಳ್ಳೇದು ಮಾಡಲುಪಕ್ರಮಿಸಿದರೂ 'ದೇವರು ಕೊಟ್ಟರೂ ಪೂಜಾರಿ ಕೊಡ' ಎಂಬಂತೆ ಇತರ ಗ್ರಹರು ಅದಕ್ಕೆ ಬೇಕಾದಷ್ಟು ವಿಘ್ನವನ್ನು ತಂದೊಡ್ಡಿ ತಾವು ಕೃತಾರ್ಥರಾಗುವರು. ಅಷ್ಟಲ್ಲದೆ ಇತರರಲ್ಲಿ ಜಳಗವನ್ನು ಗಂಟು ಹಾಕಿ ಅವರಿಂದ ಮಾನಹಾನಿಯನ್ನು ಕೂಡಾ ಮಾಡಿಸುವರು. ಆದರೂ ತಾ. ೧೭, ೨೦ ೨೧, ೨೨ರಲ್ಲಿ, ಚಂದ್ರನು ಅನುಕೂಲನಿರುವುದರಿಂದ, ಧನಲಾಭ, ರೋಗನಾಶ. ಸೌಭಾಗ್ಯವಿಜಯ—

**ಮೀನ:-**

ತಾ. ೧೮, ೧೯, ೨೩ರಲ್ಲಿ ಚಂದ್ರನು, ಇಡೀ ವಾರದಲ್ಲಿ ಕೇತುವು ಹೊರತಾಗಿ ಇತರ ಎಲ್ಲಾ ಗ್ರಹರು ವಿಮುಖರಾಗಿರುವುದರಿಂದ ಈ ರಾಶಿಯವರಿಗೆ ಬಹಳ ಕಷ್ಟವಿರುವುದು. ಆತ್ಮಕಾರಕನಾದ ರವಿಯು ರೋಗಾದಿ ಪೀಡೆಯನ್ನು ತಂದುಕೊಡುವನು ಬಲಕಾರಕನಾದ ಕುಜನು ಧನನಾಶಕಾರ್ಶ್ಯವನ್ನುಂಟುಮಾಡುವನು. ವಾಕ್ಕಾರಕನಾದ ಬುಧನು ಸುಖನಾಶವನ್ನೂ ಪುತ್ರಕಳತ್ರರಲ್ಲಿ ಕಲಹವನ್ನೂ ತಂದೊಡ್ಡುವನು. ಜ್ಞಾನ ಸುಖಕಾರಕನಾದ ಗುರುವು ದ್ವಾದಶದಲ್ಲಿರುವುದರಿಂದ ಮನೋವ್ಯಥೆಯನ್ನೂ ಸುಖನಾಶವನ್ನೂ ಮಾಡುವನು. ಮದನಕಾರಕನಾದ ಶುಕ್ರನು ಅನಿಷ್ಟಸ್ಥಾನಗತನಾಗಿರುವುದರಿಂದ ಪರಾಜಯವನ್ನುಂಟುಮಾಡುವನು. ದುಃಖಕಾರಕನಾದ ಶನಿಯು ವಿಷವಹ್ನಿ ಭಯ, ಸ್ವಜನ ವಿಯೋಗವನ್ನುಂಟುಮಾಡುವನು. ರಾಹುವು ಸಂತಾಪಕಾರಕನಾಗುವನು. ಆದ್ದರಿಂದ ಈ ಎಲ್ಲಾ ಗ್ರಹರ ತೃಪ್ತಿಗೆ ತಕ್ಕ ಪರಿಹಾರವನ್ನು ಮಾಡಿಕೊಂಡರೇನೇ ಸ್ವಲ್ಪವಾದರೂ ಕ್ಷೇಮ ಸಿಗಬಹುದು.

ವಾಚಕರಿಗೆ ಸೂಚನೆ:- ಹಿಂದೂ ಜ್ಯೋತಿಶ್ಶಾಸ್ತ್ರ ಪ್ರಕಾರವಾಗಿ ಭೂಗೋಳ ಖಗೋಳ ಎಂಬ ಎರಡು ಗೋಳಗಳಿರುವವು. ನಾವು ಇರುವ ಭೂಮಿಯೇ ಭೂಗೋಳವು. ಇದು ಅಂತರಾಳದಲ್ಲಿ ಟೊಳ್ಳು

ಶಕ್ತಿಯಿಂದ ಸ್ಥಿರವಾಗಿ ನಿಂತಿರುವುದು. ಇದರ ಸುತ್ತಲೂ ಆಕಾಶದಲ್ಲಿ ಖಗೋಳವಿರುವುದು. ಈ ಖಗೋಳದಲ್ಲಿ ರಾಶಿಚಕ್ರವೆಂಬೊಂದು ಚಕ್ರವು ಅಶ್ವಿನ್ಯಾದಿ ೨೭ ನಕ್ಷತ್ರಗಳಿಂದಲೂ ಮೇಷಾದಿ ೧೨ ರಾಶಿಗಳಿಂದಲೂ ಕೂಡಿಕೊಂಡಿದೆ. ಈ ಚಕ್ರದಲ್ಲಿ ಚಂದ್ರ, ಬುಧ, ಶುಕ್ರ, ರವಿ, ಕುಜ, ಗುರು, ಶನಿ, ಎಂಬ ೭ ಜನ ಗ್ರಹರು ಕ್ರಮವಾಗಿ ಮೇಲು ಮೇಲಕ್ಕಿರುವರು. ಈ ನಕ್ಷತ್ರರೂಪವಾದ ರಾಶಿಚಕ್ರವು ೬೦ ಘಳಿಗೆಗೆ ಒಮ್ಮೆ ಪೂರ್ವದಿಂದ ಪಶ್ಚಿಮಕ್ಕಾಗಿ ಒಂದು ಸುತ್ತು ಬರುವುದು. ಆಗ ಈ ಚಕ್ರದಲ್ಲಿ ಸಂಬದ್ಧರಾಗಿರುವ ಈ ಗ್ರಹರೆಲ್ಲರೂ ಒಂದು ಸುತ್ತು ಅದರ ಜೊತೆಯಲ್ಲೇ ಬರುವರು. ಗ್ರಹರೆಲ್ಲರಿಗೂ ಸ್ವಂತ ಚಲನೆಯೊಂದು ಪ್ರತ್ಯೇಕವಿರುವುದು. ಇದು ಪಶ್ಚಿಮದಿಂದ ಪೂರ್ವಕ್ಕಾಗಿ. ಇವರಲ್ಲಿ ಸಮೀಪದಲ್ಲಿರತಕ್ಕ ಚಂದ್ರನು ೨೭| ದಿನಗಳಲ್ಲಿ ಒಂದು ಸುತ್ತು ಬರುವನು. ಬುಧ ಶುಕ್ರರಿಂದನುಸೃತನಾದ ರವಿಯು ಒಂದು ವರ್ಷದಲ್ಲಿ ಒಂದು ಸುತ್ತು ಬರುವನು. ಕುಜನು ೨೨॥ ತಿಂಗಳಲ್ಲಿ, ಗುರುವು ೧೨ ವರ್ಷಗಳಲ್ಲಿ, ಶನಿಯು ೩೦ ವರ್ಷಗಳಲ್ಲಿ ಒಂದು ಸುತ್ತು ಬರುವರು. ಹೀಗಿರಲು ವರ್ಷಕ್ಕೊಮ್ಮೆ ಒಂದು ಸುತ್ತು ಬರುವ ಸೂರ್ಯನಿಂದಾಗಿ ಷಡ್ರುತುಗಳು ಭೂಮಿಯಲ್ಲಿ ಉಂಟಾಗುವವು. ಈ ಒಂದೊಂದು ಋತುವಿನಲ್ಲಿ ವನಸ್ಪತಿಗಳಲ್ಲೂ ಕೂಡ ಒಂದೊಂದು ರೀತಿಯ ಪರಿಣಾಮವಾಗುವುದು. ಆಯಾ ಋತುವಿನಲ್ಲಿ ಆಯಾ ಜಾತಿಯ ವೃಕ್ಷಗಳು ಹೂಬಿಡತಕ್ಕವುಗಳೆಂಬ ನಿಯಮವೂ ಇದೆ. ಅದಲ್ಲದೆ ಹವೆಯೂ ಕಾಲವೂ ಕ್ರಮವಾಗಿ ಸೆಕೆ ಮಳೆ ಮತ್ತು ಚಳಿರೂಪವಾಗಿ ಪರಿವರ್ತನೆ ಹೊಂದುತ್ತಲೇ ಇರುವುದು. ಭೂಮಿಯ ಮಣ್ಣಿನಲ್ಲಿಯೂ ಕೂಡ ಒಂದೊಂದು ತರದ ಪಾಕವುಂಟಾಗುವುದು. ಪ್ರಾಣಿಗಳ ದೇಹದಲ್ಲೂ ಕೂಡ ಪರಿವರ್ತನೆಯಾಗುವುದು. ವನಸ್ಪತಿಗಳ ಒಡೆಯ (ಓಷಧೀಶಃ) ನೆಂಬ ಹೆಸರುಳ್ಳ ಚಂದ್ರನಿಂದ ವನಸ್ಪತಿಗಳಲ್ಲಿ ತುಂಬಾ ವ್ಯತ್ಯಾಸವಾಗುತ್ತಲೇ ಇರುವುದು. ಅಲ್ಲದೆ ಈತನ ಉದಯಾಸ್ತವನ್ನನುಸರಿಸಿ ಸಮುದ್ರ ನದಿಗಳಲ್ಲೂ ಇಳಿತಭರತಗಳಾಗುತ್ತವೆ. ಭರತ ಕಾಲದಲ್ಲಿ ಗಾಯಗಳಾದರು ಕೂಡ ಹೆಚ್ಚಾಗಿ ರಕ್ತವು ಸುರಿಯುವುದು, ಇದರಿಂದ ಜಲಮಯನಾದ ಚಂದ್ರನಿಗೂ ಭೂಮಿಯಲ್ಲಿರತಕ್ಕ ಜಲಕ್ಕೂ ದೇಹದಲ್ಲಿನ ರಕ್ತರೂಪವಾದ ಜಲ ಭಾಗಕ್ಕೂ ನಿಕಟಸಂಬಂಧವಿದೆಯೆಂಬುದು ಪ್ರತ್ಯಕ್ಷ ಕಂಡುಬರುತ್ತದೆ. ಹೀಗೆ ಕೇವಲ ಸೂರ್ಯನಿಂದ ಈ ರೀತಿಯಾಗಿ ಫಲವ್ಯತ್ಯಾಸವು ಕಂಡು ಬರುವಾಗ ನವಗ್ರಹರ ಗತಿಯಿಂದಾಗಿ ಮನುಷ್ಯರಲ್ಲಿ ಫಲವ್ಯತ್ಯಾಸವು ಆಗಿಯೇ ಆಗುವುದೆಂದು ಬೇರೆ ಹೇಳಬೇಕಾಗಿಲ್ಲವು. ಆಕಾಶದಲ್ಲಿರತಕ್ಕ ಗ್ರಹರಿಗೂ ಭೂಮಿಯ ಮೇಲಿರತಕ್ಕ ಮನುಜರಿಗೂ ವ ಪ್ರಾಣಿಗಳಿಗೂ ಸಂಬಂಧವೇನು? ಅವರ ಸಂಚಾರದಿಂದ ಇವರಲ್ಲಿ ಫಲವ್ಯತ್ಯಾಸವು ಆಗಲಾರದೆಂಬ ಕುತರ್ಕಿಗಳ ಪ್ರಶ್ನೆಯು ತಿರುಳಿಲ್ಲದ್ದು. ಅಂತೂ ಗ್ರಹರಿಗೂ ಮನುಷ್ಯರಿಗೂ ನಿಕಟಸಂಬಂಧವಿದ್ದೇ ಇದೆ. ಇಲ್ಲಿ ಹಿಂದೆ ಹೇಳಿದ ೧೨ ರಾಶಿಗಳ ಫಲವು ಅಕ್ಷರಶಃ ಫಲಿಸುವುದೆಂದು ಹೇಳಲಾಗದು. ಏಕೆಂದರೆ ೧೨ ರಾಶಿಗಳಲ್ಲೇ ಎಲ್ಲಾ ಜನರ ಜನನವಿರುವುದು. ಒಂದೇ ರಾಶಿಯಲ್ಲಿ ಅರಸನೂ ಹುಟ್ಟುವನು, ಅಗಸನೂ ಹುಟ್ಟುವನು. ಪ್ರಾಜ್ಞರೂ ಹುಟ್ಟುವರು, ಅಜ್ಞರೂ ಹುಟ್ಟುವರು. ಆದರೆ ಅವರಲ್ಲಿ ವ್ಯತ್ಯಾಸವಿದ್ದೇ ಇದೆ. ಕಾರಣ ಪರಸ್ಪರ ಅವರ ಜನನ ಕಾಲವು ಒಂದೇಯಾಗಿರದು. ಸಾಮಾನ್ಯ ದಿನ ಒಂದೇ ವ ಘಳಿಗೆಯೊಂದೇಯಾದರೂ ವಿಘಳಿಗೆಯೊಂದೇಯಾಗಲಾರದು. ಅಷ್ಟೇ ಸಮಯದಲ್ಲಿ ಚಂದ್ರನ ಅವಸ್ಥೆಯು ಬೇರೆಯಾಗುವುದು. ಅದರಿಂದ ಫಲ ವ್ಯತ್ಯಾಸವಾಗುವುದು. ಆದ್ದರಿಂದ ವಾಚಕರು ಅವರವರ ಜನನ ಕಾಲೀನ ಗ್ರಹಸ್ಥಿತಿ, ವರ್ತಮಾನ ಕಾಲೀನ ದಶಾಭುಕ್ತಿ ವಿಶೇಷ, ಭಾವಸ್ಫುಟದಲ್ಲಿ ಅವರು ಹೊಂದಿರತಕ್ಕ ಸ್ಥಾನಭೇದಗಳನ್ನು ಚೆನ್ನಾಗಿ ತಿಳಿದುಕೊಂಡು ಇದರೊಂದಿಗೆ ಪರಿಶೀಲಿಸಿದ್ದಲ್ಲಿ ಸರಿಯಾಗುವುದು. ಜನನಕಾಲದಲ್ಲಿ ಉತ್ತಮನಿದ್ದ ಗ್ರಹನು ಈಗ ಕೆಟ್ಟುಹೋಗಿದ್ದರೂ ಅವನಷ್ಟೊಂದು ಕೆಟ್ಟದು ಮಾಡಲಾರನು, ಜನನ ಕಾಲದಲ್ಲಿ ಕೆಟ್ಟರತಕ್ಕ ಗ್ರಹನು ಈಗ ಒಳ್ಳೆಯ ಸ್ಥಿತಿಯನ್ನು ಹೊಂದಿದರೂ ಇಲ್ಲಿ ಹೇಳಿದಷ್ಟು ಒಳ್ಳೇದನ್ನು ಮಾಡಲು ಸಮರ್ಥನಾಗಲಾರನು. ಅಲ್ಲದೆ ಅಷ್ಟಮದಲ್ಲಿರತಕ್ಕ ಗ್ರಹನು ಭಾವಸ್ಫುಟರೀತ್ಯಾ ಸಪ್ತಮಕ್ಕೂ ಬರಬಹುದು, ವ ನವಮಕ್ಕೂ ಹೋಗಬಹುದು. ಅವೆಲ್ಲವನ್ನೂ ಚೆನ್ನಾಗಿ ಪರಿಶೀಲಿಸಿ, ಇಲ್ಲಿ ಬರೆದಿರುವ ರಾಶಿಫಲದೊಂದಿಗೆ ತ್ರೈರಾಶಿಕರೀತ್ಯಾ ಸರಿಹೋಲಿಸಿದಲ್ಲಿ ಸರಿಯಾದ ಫಲವು ಸಿಗುವುದರಲ್ಲಿ ಸಂದೇಹವಿಲ್ಲ—

—ಬಾಲಭಾಸ್ಕರ.

# ವಿನೋದದ ಪರಮಾವಧಿ

ಲೇಖಕ:
ಶ್ರೀ. ಪಿ. ವಿ. ಆಚಾರ್ಯ

"ಫ- ಫ್ಲ- ಫ್ಲ- ಫ್ಲ- ಫ-"

ನಾವೆಲ್ಲ ಕೈತಟ್ಟಿದೆವು.

"ಹಾಂ, ಎಲೆ ಹೊರಗಿಟ್ಟೆತು*," ರಮೇಶ ಮಧ್ಯದಲ್ಲಿ ಬಾಯಿ ಹಾಕಿದ.

"ಹಾಗಾದರೆ ಇನ್ನು ಶ್ರಾದ್ಧ ಮುಗಿದ ಹಾಗೆಯೇ- 'ಪಿಂಡಾನುದ್ವಾಸಯಿಷ್ಯೇ' ಆದರೆ ಸರಿ," ನಾನು ಸೇರಿಸಿದೆ.

"ಸಂಜೀವ,- ಒಟ್ಟಿಗೆ ನೀನು ಕಾಫಿ ಕೊಟ್ಟದ್ದಕ್ಕೆ ನಿನಗೆ ಪಿಂಡ ಹಾಕಿದರು ರಮೇಶ, ನಾಣಿ ಕೂಡಿ," ರಾಮು ಪಿಟೀಲ್ ಬಾರಿಸಿದ.

"ಪಾಪ, ಮೊನ್ನೆ ತಾನೇ ಮದುವೆಯಾಗಿದ್ದಾನೆ. ಇರಲಿ, ಹೆಂಡತಿ ಇನ್ನೂ ಚಿಕ್ಕವಳು," ನಂದು ಗಂಭೀರತೆಯ ಸೋಗಿನಲ್ಲಿ ಹೇಳಿದ.

ಎಲ್ಲರೂ ನಕ್ಕೆವು.

ಪುನಃ ರಮೇಶ ಸುರು ಮಾಡಿದ:

"ಹೆಂಡತಿ ಸಣ್ಣವಳು ಅಂತ ಬೇಜಾರು ಮಾಡಿಕೋಬೇಡ, ಸಂಜೀವ. ನಿನಗೆ ಪುರುಸೊತ್ತಿದ್ದರೆ ಸಾಯಿ. ನಿನ್ನ ಹೆಂಡತಿನ್ನ ನಾನು ಬಿಟ್ಟುಹಾಕೋದಿಲ್ಲ."

ಇನ್ನೊಮ್ಮೆ ನಗು.

ಮೊಡರ್ನ್ ರಿಸ್ಟೋರೆಂಟ್‌ನಲ್ಲಿ ಸಂಜೀವನ ಮದುವೆಯ ಕಾಫಿ ಕುಡಿಯುತ್ತಾ ನಮ್ಮ ಹರಟೆ ಹೀಗೇ ಒಂದೊಂದೇ ಡಿಗ್ರಿ ಏರುತ್ತಾ ಹೋಗುತ್ತಿತ್ತು.

ಈ ಪಾರ್ಟಿಯಲ್ಲಿ ನನ್ನ ಭಾವನವರೂ ಇದ್ದರು. ಅವರು ಮಾತ್ರ ಈ ಹರಟೆಯಲ್ಲಿ ಈ ವರೆಗೆ ಬಾಯಿ ಹಾಕಿರಲಿಲ್ಲ. ಈಗ ಸ್ವಲ್ಪ ಗಂಭೀರವಾಗಿಯೇ ಅವರು ಮಾತಾಡತೊಡಗಿದರು—

"ಯಾಕೆ ಸುಮ್ಮಗೆ ಅನಿಷ್ಟ ಮಾತನಾಡುತ್ತೀರಿ? ಹೀಗೆಲ್ಲ ಅನ್ನೋದು ತಪ್ಪು."

ದೇವರೇ ಇಲ್ಲ ಅಂತ ವಾದಿಸುವ ನಮ್ಮ ಭಾವನವರೂ ಹೀಗೆ ಹೇಳುವುದು ನನಗೆ ಆಶ್ಚರ್ಯವನ್ನುಂಟು ಮಾಡಿತು. ರಮೇಶ ಕೇಳಿಯೇ ಬಿಟ್ಟ—

"ಓ-ಹೋ-ಹೋ-ಹೋ! ಯಾವಾಗ ಇದು ಸನಾತನಿಗಳಾದದ್ದು ಶ್ರೀನಿವಾಸರಾಯರು?" ನಂದು ಸಂಜೀವನ ಎದೆಗೆ ಕೈಹಿಡಿದು "ಬದುಕಿದ್ದೀಯಾಪ್ಪ ಸಂಜೀವ!" ಎಂದು ನಂಜು ಮಾತಾಡಿದ.

"ನೋಡು. ಈಗಲೇ ಅರ್ಧ ಸತ್ತಾಗಿದೆ. ಇನ್ನೂ ಹೀಗೆ 'ಅನಿಷ್ಟ' ಮಾತಾಡಿದರೆ ಉಳಿದ ಅರ್ಧನೂ ಸಾಯುತ್ತಾನೆ, ನೋಡು" ಇನ್ನೊಬ್ಬ ಕುತರ್ಕ ಮಾಡಿದ.

ಭಾವ ಇನ್ನೂ ಗಂಭೀರವಾಗಿ ನುಡಿದರು—

"ನೀವು ಹೀಗೆ ಮಾತಾಡಿದ್ದರಿಂದ ಸಂಜೀವ ಸಾಯ್ತಾನೇಂತ ನಾನು ಹೇಳೋದಿಲ್ಲ. ಆದರೂ ಹೀಗನ್ನೋದು ಯೋಗ್ಯ ಅಲ್ಲ ಅಂತಲೇ ನಾನು ವಾದಿಸೋದು. ಇದು ನನ್ನ ಸ್ವಂತ ಅನುಭವದ ಮಾತು.

"ನಾವು ಚಿಕ್ಕವರಿರುವಾಗ ನನ್ನ ಅಜ್ಜಿ ಹೇಳುತ್ತಿದ್ದದ್ದು ನನಗೆ ನೆನಪಿದೆ- 'ಯಾವಾಗಲೂ ಕೆಟ್ಟ ಮಾತು ಆಡಬಾರದು. "ಅಸ್ತು ದೇವತೆ" ಆಗಾಗ್ಗೆ ಅಸ್ತು ಅಸ್ತು ಅಸ್ತು ಅನ್ನುತ್ತದೆ. ಕೆಟ್ಟದ್ದು ಹೇಳಿದರೆ ಅದಕ್ಕೇ ಅಸ್ತು ಅಂದು ಬಿಡುವುದೂ ಉಂಟು' ಎಂತ. ಆಗ ನಾನೂ ಅಜ್ಜಿಗೆ ಬುದ್ಧಿಯಿಲ್ಲವೆಂತ ಎಣಿಸಿಕೊಂಡಿದ್ದೆ. ಅವರಿಗೆ ಹೆಚ್ಚಿಗೆ ಬುದ್ಧಿಯಿತ್ತು ಎಂತ ನಾನು ಈಹೊತ್ತೂ ಹೇಳುವುದಿಲ್ಲ. ಆದರೂ ಅವರು ಹೇಳುತ್ತಿದ್ದ ಕಟ್ಟುಕತೆಯಲ್ಲಿ ಸ್ವಲ್ಪ ಹುರುಳಿತ್ತೆಂದು ಆ ಮೇಲೆ ನನಗೆ ಅನುಭವವಾಯಿತು.

"ಈ ಅನುಭವ ಆದದ್ದು ಕೆಲವು ವರ್ಷಗಳು- ಅಂದರೆ ಇಪ್ಪತ್ತಾರು- ಹನ್ನೆರಡು- ಮೂವತ್ತೆಂಟು- ಹೌದು, ಹನ್ನೆರಡು ವರ್ಷಗಳ ಕೆಳಗೆ. ಆ ಸಂದರ್ಭವನ್ನು ನಿಮಗೆ ಹೇಳಿಬಿಡುತ್ತೇನೆ.

"ಆಗ ನನಗೆ ಇಪ್ಪತ್ತು ವರ್ಷ ವಯಸ್ಸು. ನಾನು ದಿವಾಕರ ಪ್ರೆಸ್ಸಿನಲ್ಲಿ ಪ್ರಿಂಟಿಂಗ್ ಎಪ್ರೆಂಟಿಸ್ ಆಗಿದ್ದೆ. ದಿವಾಕರ ಪ್ರೆಸ್ಸು ವಿಚಿತ್ರ ಜಾತಿಯ ಜನರ ಒಂದು ಕೂಟವಾಗಿತ್ತು. ಅಲ್ಲಿಯ ಪ್ರತಿಯೊಬ್ಬ ಕೆಲಸ

---

* ಸತ್ತವರ ಶ್ರಾದ್ಧ ದಿನ ಶ್ರಾದ್ಧ ಮುಗಿದ ಮೇಲೆ ಒಂದು ಎಲೆಯಲ್ಲಿ ಅನ್ನವನ್ನು ತೆಗೆದುಕೊಂಡು ಹೋಗಿ ಹೊರಗಿಟ್ಟು ಕೈಚಪ್ಪಾಳೆ ಹೊಡೆದು ಕಾಗೆಗಳನ್ನು ಕರೆಯುತ್ತಾರೆ. ಇದಕ್ಕೆ ಬ್ರಾಹ್ಮಣರಲ್ಲಿ 'ಎಲೆ ಹೊರಗಿಡುವದ'ೆಂಬ ಪರಿಪಾಟಿಯಿದೆ.

ಗಾರನೂ ವಿಲಕ್ಷಣ ಪುರುಷನಾಗಿದ್ದ. ಅದಕ್ಕೆ ಸರಿಯಾಗಿ ಅದರ ಮೇನೇಜರರೂ ಒಂದು ತರಹದ ಮನುಷ್ಯರು. ಅವರು ಮುಂದರಿದ ವಿಚಾರಗಳ ವ್ಯಕ್ತಿಯಾಗಿದ್ದರಲ್ಲದೆ, ತಮ್ಮ ವಿಚಾರಗಳನ್ನು ಕಾರ್ಯರೂಪದಲ್ಲಿ ತರುತ್ತಲೂ ಇದ್ದರು. ಅದರಿಂದ ಅಲ್ಲಿಯ ಕೆಲಸಗಾರರೆಲ್ಲ ಸ್ವತಂತ್ರ ರೀತಿಯಲ್ಲಿ ವರ್ತಿಸಬಲ್ಲವರಾಗಿದ್ದರು ಕೆಲಸವೊಂದನ್ನು ಚೆನ್ನಾಗಿ ಮಾಡುತ್ತಿದ್ದರೆ ತೀರಿತು; ಮತ್ತೆ ಯಾವ ರೀತಿಯಲ್ಲಿ ನಗೆ-ತಮಾಷೆಗಳು ನಡೆದರೂ ಅವರ ಸೈ.

"ದಿವಾಕರ ಪ್ರೆಸ್ಸನ್ನು ನೀವು ನೋಡಿರಬಹುದು. ಅದರ ಮುಂದೆ ಒಂದು ಒಳ್ಳೆಯ ಹೂತೋಟವಿದೆ. ಕೆಲಸಗಾರರೆಲ್ಲ ಸಾಯಂಕಾಲ ಕೆಲಸ ತೀರಿದ ಮೇಲೆ ಆ ತೋಟದಲ್ಲಿ ಹೋಗಿ ಕುಳಿತು ಬೇಕಷ್ಟು ನಕ್ಕು ನಗಿಸುತ್ತಿದ್ದರು.

"ಒಂದು ಶನಿವಾರ ಸಾಯಂಕಾಲ ಅಲ್ಲಿ ನಾವೆಲ್ಲ ಕಲೆತು ಹರಟೆ ಹೊಡೆಯುತ್ತಾ ಇದ್ದೆವು. ಒಬ್ಬ ಸೀಟಿನಲ್ಲಿ ಕುಳಿತಿದ್ದ, ಒಬ್ಬ ನೆಲದ ಹುಲ್ಲಿನ ಮೇಲೆ ಮಲಗಿದ್ದ. ಇನ್ನೊಬ್ಬ ಒರಗಿದ್ದ- ಹೀಗೇ ಒಬ್ಬೊಬ್ಬರು ಒಂದೊಂದು ರೀತಿಯಲ್ಲಿದ್ದರು. ನಾನು ನೆಲದ ಮೇಲೆ ತೆಳ್ಳಗೆ ಬೆಳೆದಿದ್ದ ದೂರ್ವೆ ಹುಲ್ಲ ಮೇಲೆ ಕುಳಿತಿದ್ದೆ.

"ನಮ್ಮ ಪ್ರೆಸ್ಸಿನ ಕೆಲಸ ಐದುವರೆ ಗಂಟೆಗೆ ಬಂದಾಗುತ್ತಿತ್ತು, ಆರು ಗಂಟೆಯ ವರೆಗೆ ನಮ್ಮ ಹುಚ್ಚಾಟ ನಡೆಯುತ್ತಾ ಇತ್ತು.

"ಆರು ಗಂಟೆ ಹೊತ್ತಿಗೆ ನಮ್ಮಲ್ಲೊಬ್ಬ ಕೊಡೆ ಹಿಡಿದುಕೊಂಡು ಹೊರಟವ ಅರ್ಧದಲ್ಲೇ ನಿಂತು-'ಶೀನು ಕಲಾಸ್'' ಎಂದ.

"ತಮಾಷೆ ಏನಂತ ನೋಡುವಾ ಎಂತ ನಾವೆಲ್ಲ ಎದ್ದು ನಿಂತೆವು. ಹೂದೋಟದ ಒಂದು ಬದಿಯಲ್ಲಿ ದೇವಹಾರುವಿನ ಸಪೂರ ಹಲಗೆಯ ಮೇಲೆ ಮಲಗಿ ಶೀನು ನಿದ್ದೆ ಹೋಗಿದ್ದ—ಕಣ್ಣು-ಬಾಯಿ ಅರ್ಧ ತೆರೆದಿತ್ತು, ಕೈ ಎದೆಯ ಮೇಲಿತ್ತು.

'ನಿನ್ನೆ ಸಿನೆಮಕ್ಕೆ ಹೋಗಿದ್ದ ಅಂತ ತೋರುತ್ತದೆ,' ನಮ್ಮಲ್ಲೊಬ್ಬ ಊಹಿಸಿದ.

"ನನ್ನ ತಲೆಯಲ್ಲಿ ಫಕ್ಕನೆ ಒಂದು ವಿಚಾರ ಹೊಳೆಯಿತು.

" 'ಗಡಿಬಿಡಿ ಮಾಡಬೇಡಿ; ಒಂದು ತಮಾಷೆ ಮಾಡುವಾ' ಎಂದು ನಾನು ಪ್ರೆಸ್ ಕಟ್ಟೋಣದೊಳಗೆ ಓಡಿ, ಒಂದು ವಸ್ತ್ರವನ್ನೂ ಒಂದು ಸೂಡಿ ಹುರಿಹಗ್ಗವನ್ನೂ ತಂದೆ.

"ಶೀನೂಗೆ ಚೆನ್ನಾಗಿ ನಿದ್ರೆ ಬಂದುಹೋಗಿತ್ತು. ಮೆಲ್ಲಗೆ ಆ ವಸ್ತ್ರವನ್ನು ಅವನಿಗೆ ಹೊದಿಸಿದೆವು. ಅವನಿಗದು ಗೊತ್ತಾಗಲಿಲ್ಲ. ಹಗ್ಗದಿಂದ ಕಾಲು ಎದೆಗಳೆಡೆಯಲ್ಲಿ ಸ್ವಲ್ಪ ಸಡಿಲಾಗಿಯೇ ಅವನನ್ನು ದೇವದಾರದ ಹಲಗೆಗೆ ಬಿಗಿಯಲಾಯಿತು.

"ಸುಳ್ಳು ಸುಳ್ಳೇ ಗಟ್ಟಿಯಾಗಿ ಅಳುತ್ತಾ ನಾಲ್ಕು ಜನರು ಹಿಡಿದು ಹೆಣವನ್ನು ಎತ್ತಿದ ಹಾಗೆಯೇ ಅವನನ್ನು ಎತ್ತಿದೆವು.

"ಇಷ್ಟಾದಾಗ ಶೀನೂಗೆ ಫಕ್ಕನೆ ಎಚ್ಚರವಾಯಿತು. ನಿದ್ದೆಗಣ್ಣಿನಲ್ಲಿ ಅಲ್ಲಿಯೇ ಏಳಹತ್ತಿದನು.

" 'ನೀನು ಸತ್ತಿದ್ದೀಯೋ, ಏಳಬಾರದು, ಸುಮ್ಮನೆ ಮಲಗಿಕೋ,' ತಲೆಯ ಕಡೆ ಅವನನ್ನು ಹಿಡಿದಿದ್ದ ನಾನು ಹೇಳಿದೆ.

"ಇದನ್ನೆಲ್ಲ ನೋಡುತ್ತ ಬೇಲಿಯ ಮೇಲೆ ಕುಳಿತಿದ್ದ ನಮ್ಮ ನೆರೆಯ ಮನೆಯ ಹುಡುಗಿಯರು ಗೊಳ್ಳೆಂದು ನಕ್ಕರು.''

* * * *

ಮಧ್ಯದಲ್ಲಿ ಒಂದು ಗುಟುಕು ಕಾಫಿಯನ್ನು ಕುಡಿದು ಭಾವ ಮುಂದರಿಸಿದರು:

"ಮರುದಿನ—ಆದಿತ್ಯವಾರ—ಸಾಯಂಕಾಲ ಅಲೆಯುತ್ತಾ ನಾನು ಪ್ರೆಸ್ಸಿಗೆ ಹೋದೆ. ಶೀನು ಒಬ್ಬನೇ ಹೂದೋಟದಲ್ಲಿ ಇದ್ದ. ಕೆಲವೇ ದಿನಗಳ ಹಿಂದೆ ಮದ್ರಾಸಿನಿಂದ ಅವನು ತಂದ ನಾಯಿಯೊಂದಕ್ಕೆ ಬುದ್ಧಿ ಕಲಿಸುತ್ತಾ ಕುಳಿತಿದ್ದ. ಕೈಯಲ್ಲಿ ಒಂದು ಬೆತ್ತ ಇತ್ತು.

"ನಾನು ನೋಡುತ್ತ ನಿಂತೆ.

"ಬೆತ್ತವನ್ನು ನೆಲದ ಮೇಲೆ ಇಟ್ಟು 'ಹೆಕ್ಕು' ಎಂತ ಆಜ್ಞೆ ಇತ್ತ. ಅದಕ್ಕೆ ಸರಿಯಾಗಿ ತಿಳಿಯಲಿಲ್ಲ. ಬೆತ್ತವನ್ನು ಬಾಯಿಗೆ ತುರುಕಿದ. ಕಚ್ಚಿಕೊಳ್ಳಲಿಲ್ಲ. ಅದೇ ಬೆತ್ತದಿಂದ ಒಂದೇಟು ಹೊಡೆದ. ಒಮ್ಮೆ ಗುರ್ರೆಂದು ಮತ್ತೆ ಸುಮ್ಮನೆ ಕುಳಿತುಕೊಂಡಿತು ನಾಯಿ.

"ಪುನಃ ಬೆತ್ತವನ್ನು ನೆಲದ ಮೇಲಿಟ್ಟು 'ಹೆಕ್ಕು-ವನ್, ಟೂ, ಥ್ರಿ' ಎಂದು ಅಪ್ಪಣೆ ಕೊಟ್ಟ. ನಾಯಿ ಹೆಕ್ಕಿಕೊಳ್ಳಲಿಲ್ಲ. ಸಿಟ್ಟಿನಿಂದ ಚೆನ್ನಾಗಿ ಎರಡೇಟು ಹೊಡೆದುಬಿಟ್ಟ.

"ಬೇಟೆ ನಾಯಿಯ ಜಾತಿ. ಸ್ವಲ್ಪ ಹಸಿವೆಯೂ

ಆಗಿತ್ತು. ಬೆತ್ತದ ಏಟು ಬಿದ್ದ ಕೂಡಲೆ ಸಿಟ್ಟು ಮಿತಿ ಮೀರಿ ಬಂತು ಅದಕ್ಕೆ—ಒಂದು ಹಾರು ಹಾರಿ ಶೀನು ವಿನ ಕುತ್ತಿಗೆಯನ್ನು ಅವುಕಿ ನಾಳವನ್ನು ಕಚ್ಚಿ ಹೊರ ಗೆಳೆಯಿತು. ಕಂಠನಾಳವು ಹೊರಗೆ ಬಂತು.

"ನೆತ್ತರು ಬಸಿಯಹತ್ತಿತು. ಪ್ರೆಸ್ಸಿನಲ್ಲಿ ಬೇರಾರೂ ಇರಲಿಲ್ಲ. ಗಾಬರಿಯಾಗಿ ನಾನು ಒಂದು ಕೂಗು ಕೂಗಿದೆ. ನೆರೆಯವರು ಓಡಿಬಂದರು. ಒಬ್ಬರು ಡಾಕ್ಟರ ರಲ್ಲಿಗೆ ಓಡಿದರು.

"ಎಲ್ಲ ಪ್ರಯತ್ನಗಳು ಮಾಡಲಾದವು. ಏನೂ ಪ್ರಯೋಜನವಾಗಲಿಲ್ಲ. ಕಾಲು ತಾಸಿನೊಳಗೆ ಶೀನು ತೀರಿಹೋದ.

"ನನ್ನ ಹೃದಯದಲ್ಲಿ ಆಗ ಯಾವ ಯಾತನೆಯಾಗಿರ ಬೇಕು ಹೇಳಿ. ಅದೇ ಮೊದಲ ದಿನ ನಾನು ಅವನನ್ನು ಹೆಣವನ್ನಾಗಿ ಮಾಡಿ ಅದರಿಂದ ತುಂಬಾ ಸಂತೋಷ ಪಡೆದಿದ್ದೆ. ಆದರೆ ಇಂದು ......? ಯಾರು ಬಗೆ ದಿದ್ದರು ಹುಡುಗಾಟಿಕೆಯು ಈ ರೀತಿ ಸತ್ಯವಾಗಬಹು ದೆಂದು?

"ಅದೇ ಸ್ಥಳ—ಅದೇ ಸಮಯ ಅದೇ ಮುಚ್ಚಂಜೆ ಅದೇ ರೀತಿ ಅವನನ್ನು ದೇವದಾರು ಹಲಗೆಯಿಂದೆತ್ತಿ ಕೊಂಡು ಚಟ್ಟದಲ್ಲಿಟ್ಟುಕೊಂಡು ಅಂತ್ಯಕ್ರಿಯೆಗಾಗಿ ಕೊಂಡುಹೋದೆವು: ನಾನು ಅವೇ ತಲೆಯ ಕಡೆ ಹಿಡಿದಿದ್ದೆ.

"ಆದರೆ ನಿನ್ನೆಯದು ಠಕ್ಕು ಗೋಳು, ಅಂದಿನದು ನಿಜವಾದ ನೀರವವಾದ ಕಣ್ಣೀರು.

"ಅದೇ ಬೇಲಿಯ ಮೇಲೆ ನಿಂತಿದ್ದ ಹುಡುಗಿಯರ ಕಣ್ಣುಗಳು ಎರಡು ಬಿಂದು ಬಿಸಿ ನೀರನ್ನು ಉರುಳಿಸಿದವು."

* * * * *

"ಈಗ ಆ ಹೂದೋಟದಲ್ಲಿ ಒಂದು ಚಿಕ್ಕ ಗೋರಿ ಇದೆ. ಅದು ಶೀನೂನ ನೆನಪಿಗಾಗಿ. ಅಲ್ಲಿ ಈಗ ನಗೆ ಹೊಗೆಯುವುದಿಲ್ಲ. ಕಣ್ಣೀರಿನ ಹನಿಯೊಮ್ಮೊಮ್ಮೆ ಉದುರುವುದಿದೆ.

"ನಾವು ಮುಂಚಿನ ದಿನ ತಮಾಷೆ ಮಾಡದಿದ್ದರೆ ಶೀನು ಸಾಯುತ್ತಿದ್ದಿಲ್ಲವೆಂತಲ್ಲ. ಆದರೆ ..."

# ಸೋಜಿಗದ ಸುದ್ದಿಗಳು





ಅಮೇರಿಕದ ಅಧ್ಯಕ್ಷ ರೂಸ್-ವೆಲ್ಟರು ಮೋಟಾರ್‌ಕಾರಿನಲ್ಲಿ ಹೋಗುತ್ತಿದ್ದರು. ಒಬ್ಬ ವ್ಯಕ್ತಿಯು ಬೇಟೆನಾಯಿಯಂತೆ ಅವರ ಕಾರಿಗೆ ಹಾರಿದನಂತೆ. ದೇಹ ಸಂರಕ್ಷಕನೊಬ್ಬನು ಅವನನ್ನು ಹಿಡಿದು ದೂಡಿದಾಗ ಹಾರಿದ ವ್ಯಕ್ತಿ ಕೆಳಗೆ ಬಿದ್ದ. ವಿಚಾರಿಸಲಾಗಿ ಅವನು ರೂಸ್‌ವೆಲ್ಟರ ಬೂಟೂಸನ್ನು ತಿಕ್ಕಲು ಹಾರಿದ್ದೆಂದು ಹೇಳಿದನಂತೆ. ಅವನ ಉತ್ಸಾಹವು ವಿಶೇಷ ಸ್ವಭಾವದ್ದೇ ಸರಿ!

ಂ ಂ ಂ

ಜಪಾನಿನ ಹಡಗುಗಳಲ್ಲಿ ತುಂಬಾ ಯುದ್ಧಸಾಧನಗಳನ್ನು ತುಂಬುವುದರಿಂದ ಅವುಗಳು ವೇಗವಾಗಿ ಹೋಗುವುದಿಲ್ಲವೆಂದು ಸುದ್ದಿ. ಏನೂ ಆಶ್ಚರ್ಯವಿಲ್ಲ ಜಪಾನಿನ ಸಾಮ್ರಾಜ್ಯಶಾಹೀ ರಥ ಧಂತಾಯಿತು!

ಂ ಂ ಂ

ಜರ್ಮನಿಯಲ್ಲಿ ಹಳ್ಳಿಯ ಜನರು ಮದುವೆಯಾದರೆ ಒಂದು ತರದ ಭತ್ತೆ ಕೊಡಲ್ಪಡುವುದೆಂದು ಜನರಲ್ ಗೋಋಂಗರ ಹೊಸ ಆಜ್ಞೆ. ಇದು ಭಾರತಕ್ಕೆ ಸಮನ್ವಯಿಸಿದ್ದರೆ ತುಂಬಾ ಮದುವೆಗಳಾಗಿ ಹೋಗುತ್ತಿದ್ದುವು!

ಂ ಂ ಂ

ಕಾಂಗ್ರೆಸ್ ಅಧ್ಯಕ್ಷರು ರಾಜೀನಾಮೆ ಕೊಡುವೆನೆಂದು ಹೇಳಿದುದಕ್ಕೆ ಶ್ರೀ. ಸತ್ಯಮೂರ್ತಿಯವರಿಗೆ ಬಹಳ ಬೇಸರವಾಗಿದೆ. ಅವರಿಗೆ ಬೇಸರವಾಗಲು ಮೂಲ ಕಾರಣವೆಂದರೆ ಹಾಗೆ ಮಾಡುವುದರಿಂದ ಅವರ ಫೆಡರಲ್ ಎಸೆಂಬ್ಲಿ ಸದಸ್ಯತನಕ್ಕೆ ೦ ಯಾವಂತಾಗುತ್ತದೆಂದೇ?

ಂ ಂ ಂ

ಮಧ್ಯಪ್ರಾಂತ್ಯದ ಪ್ರಧಾನರು ವಿಮರ್ಶೆಗೆ ಬೆದರುವುದಿಲ್ಲವೆಂದು ಇತ್ತೀಚೆಗೆ ನಡೆದ ಪತ್ರಿಕೋದ್ಯಮಿಗಳ ಪರಿಷತ್ತಿನಲ್ಲಿ ಹೇಳಿದ್ದಾರೆ. ಬೆದರದಿರುವುದು ಅವರು ಮಾತ್ರವಲ್ಲ. ದಕ್ಷಿಣ ಕನ್ನಡದ ಕಾಂಗ್ರೆಸ್ ಅಧಿಕಾರಿಗಳಲ್ಲಿ ಕೆಲವರು ಎಂತಹ ವಿಮರ್ಶೆಯನ್ನೂ ಲೆಕ್ಕಿಸುವುದಿಲ್ಲ!

ಂ ಂ ಂ

ಇತ್ತೀಚೆಗೆ ನಡೆದ ಮಂಗಳೂರು ಮುನ್ಸಿಪಾಲಿಟಿಯ ಸಭೆಯಲ್ಲಿ ಪ್ರಶ್ನೆಗಳ ನೆರೆ ಬಂದು ಅಲ್ಲಿಯ ಕಮಿಷನರರು ತೇಲಿ ಹೋಗುವುದರಲ್ಲಿದ್ದರು. ಇಂತಹ ಪ್ರಶ್ನೆಗಳನ್ನು ಕೇಳಿ ಗುಟ್ಟುರಟ್ಟು ಮಾಡುವುದಕ್ಕೆ 'ಹಿತ್ತಾಳಿ ಹೊರಗೆ ಹಾಕುವುದು' ಎಂದೆನ್ನುತ್ತಾರೆಯೇ?

ಂ ಂ ಂ

ಜಿಲ್ಲೆಯ ಪ್ರಮುಖ ಪಟ್ಟಣವಾದ, ಕಾಂಗ್ರೆಸಿನ ಮುಖ್ಯಾಲಯವಾದ, ಜಿಲ್ಲಾ ಕಮಿಟಿ ಅಧ್ಯಕ್ಷರ ಊರಾದ, ಮಾತ್ರವಲ್ಲ, ಅಖಿಲ ಭಾರತ ಧುರೀಣೆಯರ ನೆಲೆವೀಡಾದ ಮಂಗಳೂರಲ್ಲಿ ಕಾಂಗ್ರೆಸ್ ಅಧ್ಯಕ್ಷರಾದ ಸುಭಾಷಬೋಸರ ಬಿನ್ನಹದಂತೆ ಚೀನಾದಿನವನ್ನು ಆಚರಿಸುವ ಗೊಡವೆಗೆ ಯಾರೂ ಹೋಗಲಿಲ್ಲ. ಚೀನಾ ಯುದ್ಧಕ್ಕಿಂತಲೂ ಅವರೊಳಗಿನ ಯುದ್ಧವೇ ಮಹತ್ವದ್ದಾಗಿರುವಾಗ ಇಂತಹ ದಿನಾಚರಣೆಗೆ ಸಮಯವೆಲ್ಲಿ ಸಿಗಬೇಕು?

ಂ ಂ ಂ

ಮಂಗಳೂರಿನ ಉರ್ವದಲ್ಲೊಂದು ಮದ್ಯದಂಗಡಿ. ಮಾರ್ಗದ ಬದಿಯಲ್ಲೇ ಅಂಗಡಿ! ರಸ್ತೆಯೇ ಅದರ ಅಂಗಳ. ರಸ್ತೆಯಲ್ಲೇ ಮದ್ಯ ಸೇವಿಸುವಿಕೆ. ಶಾಲಾ ಹುಡುಗರು ಮತ್ತು ಹೆಂಗಸರು ಅತ್ತಿತ್ತ ಹೋಗುವಾಗ ಮದ್ಯ ಸೇವಿಸಿದವರು ತಮ್ಮ ವಿಶ್ವರೂಪವನ್ನು ತೋರಿಸುವುದುಂಟು. ಊರವರು ಈ ಮದ್ಯದಂಗಡಿಯನ್ನು ಸ್ವಲ್ಪ ದೂರ ಒಯ್ಯಬೇಕೆಂದು ಮೊರೆಯಿಟ್ಟರಂತೆ. ಸಂಬಂಧಪಟ್ಟ ಅಧಿಕಾರಿಗಳು ಈ ತನಕ ದಯೆ ತೋರಿಸಲಿಲ್ಲ. ಇನ್ನಾದರೂ ತೋರಿಸುವರೇ ಎಂಬೊಂದು ಮೊರೆಯಿಡುವ ಬಾತ್ಮಿ!

ಂ ಂ ಂ

ಅಖಿಲ ಭಾರತ ತೀವ್ರಗಾಮಿಗಳ ಪಕ್ಷವೊಂದು ಬೇಗನೆ ರಚನೆಯಾಗಲಿದೆಯೆಂದೂ ಕಾಮ್ರೇಡ್ ಯಂ. ಯನ್. ರಾಯರೊಡನೆ ಕೂಡಾ ಸಂಬಂಧಪಟ್ಟವರು ಮಾತಾಡುವರೆಂದೂ ಲಕ್ನೋದಿಂದ ಒಂದು ಸುದ್ದಿಯು ಕೇಳಿ ಬರುತ್ತಿದೆ. ಹಾಗಾದರೆ ಈಗಿನ ಕಾಂಗ್ರೆಸ್ ಸಮತಾವಾದಿ ಪಕ್ಷಕ್ಕೆ 'ಇತಿಶ್ರೀ' ಯಾಗುವುದೆ?

ಂ ಂ ಂ

ಅಕ್ಟೋಬರ ೧ರಂದು ಕಡಪದಲ್ಲಿ ಪಾನನಿಷೇಧ ಜಾರಿ! ಪ್ರಧಾನರಾದ ರಾಜಾಜಿಯವರು ಕಡಪದಲ್ಲಿ ಭಾಷಣಮಾಡುತ್ತಾ 'ಕೊನೆಯ ದಿನ ಎಲ್ಲರೂ ಬೇಕಾದಷ್ಟು ಕುಡಿದು ಕುಣಿಯಲಿ' ಆದರೆ ಮರುದಿನ ಮದ್ಯದಂಗಡಿಗಳನ್ನು ಗುಡಿಸಿ,

ಶುಚಿಯಾಗಿರಿಸಿ ಊರಲ್ಲಿ ಗ್ರಾಮಫೋನುಗಳಿದ್ದವರು ತಮ್ಮ 'ಹಾಡಿನ ಬಟ್ಟಲು'ಗಳಿಂದುಂಟಾಗುವ ಸಂಗೀತವನ್ನು ಎಲ್ಲರೂ ಕೇಳುವಂತೆ ಮಾಡಿರಿ' ಎಂದರು. ಸರಿ, ನಮ್ಮಲ್ಲಿಯ ಕಾಫಿಹೊಟೆಲುಗಳೆಂಬ ಮದ್ಯದಂಗಡಿಗಳಲ್ಲಿ ಗ್ರಾಮಫೋನ್ ಮತ್ತು —ದಂತಿರುವ ಕಾಫಿ ಇವೆರಡೂ ಧಾರಾಳವಾಗಿವೆ.

೦ ೦ ೦

ಹಿಂದುಸ್ಥಾನಿಯನ್ನು ಕಲಿತರೆ ಹಿಂದು ಮುಸಲ್ಮಾನರೊಳಗೆ ಐಕ್ಯವಾಗುವುದೆಂದಿದ್ದಾರೆ ರಾಜಾಜಿಯವರು. ಪ್ರಾಯಶಃ ಅದಕ್ಕಾಗಿಯೇ ಹಿಂದುಸ್ಥಾನಿ ಚೆನ್ನಾಗಿ ತಿಳಿಯದ ಮಿ| ಜಿನ್ನಾಜಿಯವರು ಹಿಂದುಸ್ಥಾನಿಯಿಂದ ಇಸ್ಲಾಮ್ ಹಾಳಾಗುತ್ತಿದೆಯೆನ್ನುವುದಾಗಿರಬಹುದು.

೦ ೦ ೦

ರಾಷ್ಟ್ರಧ್ವಜವು ಸರ್ವರದು. ನದಿಯಿಂದ ನೀರು ತೆಗೆಯುವ ಹಕ್ಕು ಎಲ್ಲರಿಗೂ ಇರುವಂತೆ ಇದು ಕೂಡಾ ಪ್ರತಿಯೊಬ್ಬರ ಧ್ವಜವಾಗಿದೆ, ಎಂದು ರಾಜಗೋಪಾಲಾಚಾರ್ಯರು ಅಲ್ಲಿಯೇ ಹೇಳಿದ್ದಾರೆ.



ನಮ್ಮ ಚಿತ್ರಕಾರರ ದೃಷ್ಟಿಯಲ್ಲಿ
ಅಮೇರಿಕದ ಅಧ್ಯಕ್ಷ ರೂಸ್‌ವೆಲ್ಟರು.

ಸರಿ. ಈ ವಿಚಾರವು ಉಡುಪಿಯವರಿಗೆ ಮೊದಲೇ ಗೊತ್ತಿತ್ತು. ಆದುದರಿಂದಲೇ ಕಳೆದ ಜಿಲ್ಲಾ ಬೋರ್ಡು ಚುನಾವಣೆಯಲ್ಲಿ ಕಾಂಗ್ರೆಸಿನವರೂ ಸ್ವತಂತ್ರ ಪಕ್ಷೀಯರೂ ರಾಷ್ಟ್ರಧ್ವಜವನ್ನು ಪಯೋಗಿಸಿದ್ದಾಗಿದೆ.

೦ ೦ ೦

“ಆಧುನಿಕ ಪ್ರಜಾಸತ್ತೆಯಲ್ಲಿ ಚುನಾವಣೆಗಳು ತುಂಬಿಕೊಂಡಿವೆ. ಚುನಾವಣೆಯಲ್ಲಿ ನಮ್ಮ ಪೈಕಿ ಕೆಲವರು ಪರಾಜಯ ಹೊಂದಬಹುದು. ನಾವು ಅದನ್ನು ಮರೆತುಬಿಡಬೇಕು. ಎಲ್ಲಾ ಕಲಹಗಳನ್ನು ಮರೆಯಬೇಕೆಂಬುದೇ ದೈವೇಚ್ಛೆ. ನಾವು ಅವುಗಳನ್ನು ಮರೆಯಬೇಕು. ಆ ಸ್ವಭಾವವು ಯೋಗ್ಯವಾಗಿದೆ. ಆಗ ತಾನೇ ನಾವು ಸಂತೋಷಜೀವಿಗಳಾಗಬಹುದು” ರಾಜಾಜಿಯವರಾಡಿದ ಮಾತುಗಳಿವು. ನಮ್ಮಲ್ಲಿ ಹೆಚ್ಚಿನವರು ಪ್ರಾಂತಿಕ ಸ್ವಾಯತ್ತೆಯು ದೊರಕಿದ ಬಳಿಕ ಬ್ರಿಟಿಷ್ ಸಾಮ್ರಾಜ್ಯಶಾಹಿಯೊಡನೆ ನಡೆಸುತ್ತಿದ್ದ ಸಮರವನ್ನು ಮರೆತುಬಿಟ್ಟಿದ್ದಾರೆ. ಮರೆತು ಸಂತೋಷಜೀವಿಗಳಾಗಿದ್ದಾರೆ. ದೈವೇಚ್ಛೆಯನ್ನು ಪರಿಪಾಲಿಸಿದ್ದಾರೆ.

೦ ೦ ೦

ಮಾನ್ಯ ರಾಜಗೋಪಾಲಾಚಾರ್ಯರು ಪ್ರಜೆಗಳನ್ನು ಮಕ್ಕಳೆಂದು ಸಂಬೋಧಿಸುತ್ತಾ “ನನ್ನ ಮಕ್ಕಳಿಗೆ ತಂದೆಯಿಲ್ಲ. ದ್ವಿದಳ ರಾಜ್ಯಪದ್ಧತಿಯ ಕಾಲದಲ್ಲಿ ಒಬ್ಬ ತಂದೆಯಿದ್ದನು. ಆಗತಾಯಿಕೂಡಾ ತನ್ನ ಮಕ್ಕಳು ಜಗಳ ಮಾಡಿಕೊಳ್ಳಲು ಬಿಡುತ್ತಿದ್ದಳು. ಆದರೆ ಈಗ ನಾನೋರ್ವ ವಿಧವೆ ಜನನಿ........ನೀವೆಲ್ಲರೂ ವಿಧವೆಯಾದ ನಿಮ್ಮ ಜನನಿಯ ಒಳ್ಳೆ ಮಕ್ಕಳಾಗಲೆತ್ನಿಸಬೇಕು” ಎಂದು ಹೇಳಿದರು. ಆದರೆ ನಮ್ಮಮ್ಮನೊಂದಿಗೆ ನಾವೊಂದು ಪ್ರಶ್ನೆ ಕೇಳುತ್ತೇವೆ. ‘ಹಿಂದಿನ ಕಾಲದ ‘ನಮ್ಮಪ್ಪ’ ನಿಜವಾಗಿಯೂ ತೀರಿಕೊಂಡಿದ್ದಾನೆಯೇ? ನಮಗೆ ತಿಳಿದ ಮಟ್ಟಿಗೆ ಅವನು ಇಂಗ್ಲೆಂಡಿಗೆ ತೆರಳಿದ್ದಾನೆ. ನಮ್ಮಮ್ಮನಿಗೆ ಅಲ್ಲಿಂದ ಪತ್ರ ಬರುವುದಿಲ್ಲವೇ? ನಮ್ಮಮ್ಮ ಅರ್ಧ ಮುತ್ತೈದೆಯಾದರೂ ವಿಧವೆಯೆಂದು ಹೇಳಿಕೊಳ್ಳುವುದೇಕೆ? ಪ್ರಾಯಶಃ ನಮ್ಮ ತಂಟೆಯನ್ನು ಸಹಿಸಲಾಗದಿದ್ದುದರಿಂದಾಗಿರ

ಬೇಕು. ಅಮ್ಮಾ! ಹೇಗಾದರೂ 'ನಮ್ಮಪ್ಪ'ನನ್ನು ನಾವು ಕೊಂದು ಹಾಕಬೇಡವೇ?

೦ ೦ ೦

ಇಷ್ಟುರತನಕ ಸಮತಾವಾದಿ ಪಕ್ಷವು 'ಕಾಂಗ್ರೆಸ್' ಸಮತಾವಾದಿ ಪಕ್ಷವಾಗಿತ್ತು. ಆದರೆ ಹೊಸತೊಂದು ಪಕ್ಷವು ಕಾಂಗ್ರೆಸಿನ ಒಳಗಿದ್ದು ಹೋರಾಡುವುದಂತೆ. 'ಕಾಂಗ್ರೆಸ್ ಸಮತಾವಾದಿ ಪಕ್ಷ'ವು ತನ್ನ ಹೆಸರಿನಿಂದ 'ಕಾಂಗ್ರೆಸ್' ಎಂಬುದನ್ನು ಬಿಟ್ಟುಬಿಡುವುದಂತೆ. ಕಾಂಗ್ರೆಸಿನೊಳಗಣ ಈ ತೀವ್ರಗಾಮಿ ಪಕ್ಷವು ಪಾರ್ಲಿಮೆಂಟರೀ ಮನೋವೃತ್ತಿಯವರೊಡನೆ ಹೋರಾಡುವುದಂತೆ. ಶ್ರೀಗಳಾದ ಭೂಲಾಭ್ಯಾ, ಸತ್ಯಮೂರ್ತಿಯವರು ಏನು ಮಾಡಲಿದ್ದಾರೆಂಬುದು ಇನ್ನೂ ತಿಳಿದು ಬಂದಿಲ್ಲ.

೦ ೦ ೦

ಮುಸ್ಲಿಮ್ ಜನತಾ ಸಂಪರ್ಕವನ್ನು ಕಾಂಗ್ರೆಸ್ ನಿಲ್ಲಿಸಬಾರದೆಂದು ಸಂಯುಕ್ತ ಪ್ರಾಂತ್ಯದ ರಾಷ್ಟ್ರೀಯ ಮುಸ್ಲಿಮರ ಬೇಡಿಕೆ. ಆದರೆ ಕಾಂಗ್ರೆಸ್ ಧುರೀಣರಿಗೆ ಆಗಾಗ ಧುರೀಣರೊಡನೆ ಮಾತಾಡಿಯೇ ಐಕ್ಯಸಾಧಿಸುವ ಸ್ಫೂರ್ತಿ ಬಂದು ಬಿಡುವುದುಂಟು. ಐಕ್ಯದ ಸಾಧನೆಯ ರಹಸ್ಯವೆಲ್ಲಾ ಬಹಿರಂಗವಾದುದರಿಂದ ಇನ್ನು ಜನತಾ ಸಂಪರ್ಕವೇ ಗತಿ. ಆದರೆ ಮತ್ತೊಮ್ಮೆ ಧುರೀಣರೊಡನೆ ರಾಜೀ ಪ್ರಸ್ತಾಪ ಮಾಡುವ 'ಸ್ಫೂರ್ತಿ' ಬಂದು ಬಿಡಬಹುದೋ ಎಂಬ ಸಂಶಯ!

---

## ಬೆಂದೊಡಲ ಬಿಸಿಯುಸಿರು!

ಪ್ರಜೆಗಳ ಗೆಲುವೇ ತಮ್ಮಗೆಲು
ಪ್ರಜೆಗಳ ಅಳುವೇ ತಮ್ಮ ಅಳು
ಎಂದೊರದಿಂದು ಮಾಡುವುದೇನು?
ಕುಂದಿದ ಮೋರೆಗೆ ಹೊಡೆಯುವುದೇ?
ಹೊಡೆ ನೀನು! ಬಡೆ ನೀನು! || ೧ ||

ಸುರೆಯನು ಸೇವಿಸೆ ಕೆಡುಕುಂಟು
ಸುರೆಯನು ಬಿಟ್ಟರೆ ಒಳಿತುಂಟು
ಎಂದವರಿಗೆ ನೀಮಾಡುವುದೇನು?
ಬಂಧಿಸಿ ಬನ್ನವ ಬಡಿಸುವುದೆ?
ನೀಹೂಡು! ನೀಮಾಡು! || ೨ ||

ಬಲಿದಾನವ ಗೈದರು ಅಂದು
ಬಲಿದಾನವ ಗೈವರು ಇಂದು
ಸಾತ್ವಿಕರೆಲ್ಲರು ಬರುವರು ಮುಂದು
ಸಾತ್ವಿಕ ಬಲವನು ತೋರುವರಂದು
ನೀಮಾಡು! ನೀನೋಡು || ೩ ||

ಕೋವಿಯು, ಲಾಟಿಗಳಿರಬಹುದು.
ನೋವೂ-ಸಾವೂ ಬರಬಹುದು.
ಆಳುವ ನಾನರಸೆನ್ನುವೆಯಾ?
ಬಾಳಿನ ಗೋಳನು ನೋಡುವೆಯಾ?
ನೀನೋಡು! ನೀಮಾಡು || ೪ ||

ಭುವಿಯೊಳು ಅವಿತಿದೆ ಅಂತ್ಯ ನಿಜ
ಭುವಿಯೊಳು ಸರ್ವಕೆ ಹದ್ದು ನಿಜ
ಮೇರೆಮೀರೆ ಅಳಿಗಾಲ ನಿಜ
ವೀರನು ಪಶುಬಲಕ್ಕಂಜ ನಿಜ
ನೀತಾಳು! ನೀಕೇಳು! || ೫ ||

ಸ್ವಾತಂತ್ರ್ಯವೆ ಸೃಷ್ಟಿಯ ಮೂಲ!
ಅದಕೇಳಿದ ಮನುಜಗೆ ಕೋಳ
ಹಾಕಿಸಿ ಚುಚ್ಚುವೆ ನೀ ಶೂಲ
ಅನ್ಯಾಯದ ಹೊರೆಯಾಯಿತು ಬಹಳ
ನೀತಾಳು! ನೀಕೇಳು! || ೬ ||

ತುಂಬಿತು ನಿನ್ನಯ ಪಾಪ ಗನಿ
ಕಿವಿಗದೊ ಕೇಳ್ವುದು ಅಂತ್ಯ ಧ್ವನಿ
ಅಡಗಿಹ ಪಾಪವು ಬಯಲಾಗುವುದು
ಕಡೆಗಾದರು ಜಯ ಧರ್ಮಕ್ಕಾಗುವುದು

—ಕೆ. ಟಿ. ಕರ್ಕೇರ, ಬೊಂಬ್ಬೆ.

---

# ಸಾರ್ವಜನಿಕ ವ್ಯಕ್ತಿಗಳೂ *

## ಅವರ

# * ಖಾಸಗಿ ಜೀವನವೂ



**ಸಾರ್ವಜನಿಕ ರಂಗದಲ್ಲಿ ಕೀರ್ತಿ ಪ್ರತಿಷ್ಠೆ ಗಳನ್ನು ಪಡೆದ ಧುರೀಣರು ಮಾಡುವ ಎಲ್ಲಾ ಚಟುವಟಿಕೆಗಳನ್ನು ಜನತೆಯು ಕುರುಡಾಗಿ ಅನುಕರಿಸುತ್ತದೆ. ಸಾರ್ವಜನಿಕ ವ್ಯಕ್ತಿಗಳ ಖಾಸಗಿ ಜೀವನದ ರೀತಿಯು ಸಮಾಜದ ಪದ್ಧತಿಗಳಿಗೆ ವಿರೋಧವಾಗಿದ್ದರೆ ಅದರಿಂದಾಗಿ ಸಮಾಜವೇ ಕೆಡಲಾರಂಭಿಸು ತ್ತದೆ. ಆದುದರಿಂದ ಧುರೀಣರು ತಮ್ಮ ಖಾಸಗಿ ಜೀವನದ ಕುರಿತು ಜಾಗರೂಕರಾಗಿರಬೇಕೆ ?**



ಸಾರ್ವಜನಿಕ ಖಾಸಗಿ ಜೀವನವನ್ನು ವಿಮರ್ಶಿಸುವ ಹಕ್ಕು ಇತರರಿಗಿದೆಯೆ? ಈ ಸಮಸ್ಯೆಯನ್ನು ಬಗೆಹರಿಸುವ ಕಾರ್ಯವು ಕಷ್ಟವಾಗಿದ್ದರೂ, ಇದು ಸಮಾಜದ ವ್ಯವಸ್ಥೆ ಹಾಗೂ ಉನ್ನತಿಗೆ ಸಂಬಂಧಪಟ್ಟ ಒಂದು ವಿಷಯವಾಗಿದೆ. ಧುರೀಣರು ತಮ್ಮ ಖಾಸಗಿ ಜೀವನದಲ್ಲಿ ಹೇಗಿರುತ್ತಾರೆಂಬುದನ್ನು ವಿವರಿಸುವುದು ನನ್ನ ಕಾರ್ಯವಲ್ಲ.

ಇದರಲ್ಲಿ ಅತ್ಯಂತ ಪ್ರಾಮುಖ್ಯವಾದ ವಿಷಯವೆಂದರೆ ಸಮಾಜಕ್ಕುಂಟಾಗುವ ಪರಿಣಾಮ. "ಮನುಷ್ಯನು ಸಾಮಾಜಿಕ ಜೀವಿ" ಎಂಬುದನ್ನು ಎಲ್ಲರೂ ಒಪ್ಪುತ್ತಾರೆನ್ನಿ. ಸಾರ್ವಜನಿಕ ವ್ಯಕ್ತಿಗಳು ಸಾರ್ವಜನಿಕ ರಂಗದಲ್ಲಿ ಮಾಡುವ ಕಾರ್ಯಗಳ ಕುರಿತಲ್ಲದೆ ಅವರ ಖಾಸಗಿ ಜೀವನದ ಎಲ್ಲೆಗಟ್ಟುಗಳೊಳಗೆ ಜನಾಭಿಪ್ರಾಯವು ಹೋಗಬಾರದೆಂಬುದು ಸರಿಯಲ್ಲ. ಸಾರ್ವಜನಿಕ ವ್ಯಕ್ತಿಗಳು ಸಾರ್ವಜನಿಕ ರಂಗದಲ್ಲಿ ದುಡಿಯುವವರಾದುದರಿಂದ ಅವರು ಅದರಿಂದ ಹೊರಗೆ ಹೋಗಿ ಸಮಾಜದ ಉನ್ನತಿಗಾಗಿ ದುಡಿಯಬಾರದೆಂದಿಲ್ಲ. ಭಾಷಣವೇದಿಕೆಗಳಲ್ಲಿ ಹಾಗೆ ಮಾಡಿರಿ, ಹೀಗೆ ಮಾಡಿರೆನ್ನುವುದು ಮಾತ್ರ ಅವರ ಕರ್ತವ್ಯವಲ್ಲ. ಇದರಿಂದ ರಾಜಕೀಯ ದೃಷ್ಟಿಯಲ್ಲಿ ಕೆಲವು ಪರಿಣಾಮಗಳಾಗಬಹುದಲ್ಲದೆ, ಸಾರ್ವಜನಿಕ ವ್ಯಕ್ತಿಗಳು ಆದರ್ಶ ಜೀವನವನ್ನು ನಡೆಸದಿದ್ದರೆ ಸಮಾಜದ ಪರಿಸ್ಥಿತಿಯು ಒಳ್ಳೆದಾಗುವಂತಿಲ್ಲ. ಸಾರ್ವಜನಿಕ ವ್ಯಕ್ತಿಗಳು ಜನಪ್ರೀತರಾಗಿರುವುದರಿಂದ ಅವರ ನಡೆನುಡಿಗಳನ್ನು ಜನರು ಕುರುಡಾಗಿ ಅನುಕರಿಸುತ್ತಿರುವರೆಂಬುದು ಹಲವರ ಅನುಭವದ ಮಾತಾಗಿದೆ. ತಂದೆಯು ಮಗನಿಗೆ ಯೋಗ್ಯ ಜೀವನದ ಮಾದರಿಯನ್ನು ಹಾಕಿಕೊಡುವಂತೆ, ಸಾರ್ವಜನಿಕ ವ್ಯಕ್ತಿಗಳು ಸಮಾಜಕ್ಕೆ ತಮ್ಮ ಆದರ್ಶ ಜೀವನವನ್ನು ನಡೆಸಿ ತೋರಿಸುವುದು ಅವರ ಕರ್ತವ್ಯವಾಗಿದೆ.

ಆದರೆ ಈಗ ಜನಪ್ರೀತತೆಯು ಎಷ್ಟೊಂದು ಮಟ್ಟಿಗೆ ದುರುಪಯೋಗವಾಗುತ್ತಿದೆ? ಇತ್ತೀಚೆಗೆ ಧುರೀಣರು ಮಾಡುವ ನಿಸ್ವಾರ್ಥಪರ ಸೇವೆಗಾಗಿ ಅವರಿಗೆ ಅದೊಂದು ತರದ ವೇತನವು ಕೊಡಲ್ಪಡಬೇಕೆಂಬ ಸೂಚನೆಗಳು ಕೇಳಿಬರುತ್ತಿವೆ. ಈ ಸೂಚನೆಯು ಯೋಗ್ಯವಾಗಿದ್ದರೂ, ಅವರು ಸಾರ್ವಜನಿಕರಿಗೆ ಸಲ್ಲಿಸಬೇಕಾದ ಸೇವೆಯನ್ನು ತಮ್ಮ ಕರ್ತವ್ಯವೆಂದು ಭಾವಿಸಿ ಅದಕ್ಕನುಗುಣವಾಗಿ ನಡೆಯಬೇಡವೆ? ಮೊನ್ನೆ ಮೊನ್ನೆ ಪಂಡಿತ ನೆಹರುಗಳು ಯುರೋಪು ಸಂಚಾರಕ್ಕೆ ತೆರಳುವ ಮೊದಲು ಸಾರ್ವಜನಿಕರಿಗೆ ತಮ್ಮ ಸಂಚಾರದ ಕಾರಣವನ್ನು ಹೇಳಿದ್ದಾರೆ. ಅವರ ಸಂಚಾರವು ರಾಜಕೀಯ ಕಾರ್ಯಗಳಿಂದ ತುಂಬಿದ್ದರೂ, ಅವರು ಆರೋಗ್ಯದ ಸುಧಾರಣೆಗಾಗಿ ಎಂಬ ಕಾರಣವನ್ನು ಮುಂದೆ ತಂದಿರುವುದರಲ್ಲಿ ಯಾವ ತೊಂದ

ರೆಯೂ ಇಲ್ಲ. ಚೆನ್ನಾಗಿ ದುಡಿದು ತಮ್ಮ ಆರೋಗ್ಯ ಪರಿಸ್ಥಿತಿಯನ್ನು ಕೆಡಿಸಿಕೊಂಡವರು ಅತ್ಯವಶ್ಯವಾಗಿ ವಿಶ್ರಾಂತಿಯನ್ನು ಪಡೆಯಲೇ ಬೇಕು. ಇಂಥ ವಿಚಾರ ಗಳನ್ನು ವಿಮರ್ಶಿಸುವ ಹಕ್ಕು ಸಾರ್ವಜನಿಕರಿಗೆ ಖಂಡಿತ ವಾಗಿಯೂ ಇಲ್ಲ. ಆದರೆ ಇತರರಿಗೆ ನೈತಿಕ ದೃಷ್ಟಿ ಯಲ್ಲಿ ಈ ರೀತಿಯ ಸ್ವಾತಂತ್ರ್ಯವನ್ನು ಕೊಡುವುದೂ, ಅವರು ಅದನ್ನು ದುರುಪಯೋಗಿಸುವುದೂ, ಸಮಾಜದ ಹಿತದೃಷ್ಟಿಗೆ ವಿರೋಧವಾಗಿದೆ.

ಸ್ಪಷ್ಟವಾಗಿ ಹೇಳುವುದಿದ್ದರೆ ಧನ, ಪ್ರಭಾವ ಮತ್ತು ಲೈಂಗಿಕ ವಿಚಾರಗಳು ಯಾರನ್ನಾದರೂ ಕೆಡಿಸುವ ಮೂರು ಮೂಲಭೂತ ವಿಚಾರಗಳಾಗಿವೆ. ಎಂದಾದ ರೊಂದು ದಿನ ಮಹಾ ಸಂತರು ಕೂಡಾ ಈ ಮೂರು ದುರ್ಗುಣಗಳಲ್ಲಿ ಒಂದಕ್ಕೆ ತುತ್ತಾಗಬಹುದು. ಆದುದ ರಿಂದಲೇ ಸಮಾಜವು ಈ ವಿಚಾರಗಳಲ್ಲಿ ಒಂದು ಕಠಿನ ನಿಯಮವನ್ನು ಮಾಡುವುದು ಅತ್ಯವಶ್ಯವಾಗಿದೆ. ಇವು ಗಳು ಧುರೀಣರಿಗೆ ವಿಶೇಷವಾಗಿ ಸಮನ್ವಯಿಸಬೇಕಾ ಗಿದೆ. ಇದು ನಿದರ್ಶನಾತ್ಮಕವಾಗಿ ಹೇಳಿದ ಕೆಲವು ಮಾನಸಿಕ ಅನುಕರುಣೆಯ ವಿಚಾರಗಳಾಗಿವೆ.

ಈ ಸಮಸ್ಯೆಯನ್ನು ನಾವು ಇನ್ನೊಂದು ದೃಷ್ಟಿ ಯಿಂದ ಪರಿಶೀಲಿಸೋಣ. ಸಾರ್ವಜನಿಕ ವ್ಯಕ್ತಿಗಳ ಗೌರವವನ್ನು ಕಾಯ್ದು ಕೊಳ್ಳುವುದಕ್ಕಾಗಿ ಕೆಲವೊಮ್ಮೆ, ಕಲೆಯಂತೆ ನೀತಿಯೂ ವೈಯಕ್ತಿಕ ಸ್ವಭಾವದ್ದಾಗಿದೆ ಎಂದು ಹೇಳುವುದಿದೆ. ಇದೊಂದು ನಿರ್ಮಿತವಾದ ವಾಗಿದೆ. ಕಲೆಯಂತೆ ನೀತಿಗೂ ಕೆಲವು ಕಠಿನ ನಿಯ ಮಗಳಿವೆ. ಇದು ಎಲ್ಲಿಯ ವರೆಗೆ ಯೋಗ್ಯವಾದು ದೆಂದರೆ ಅಂಥವರು ಅನುಸರಿಸುವ ನೀತಿಯು ಸಮಾಜಕ್ಕೆ ಹಾನಿಕಾರಕವಾಗದಿರುವ ತನಕ ಮಾತ್ರ. ಸಮಾಜ ವೆಂದರೆ ಹಲವಾರು ಧುರೀಣರಿಂದ ಮಾಡಲ್ಪಟ್ಟ ಒಂದು ಸಂಸ್ಥೆಯಲ್ಲ. ಮಹಾತ್ಮಾ ಗಾಂಧಿಯವರಂಥವರು ವೈಯಕ್ತಿಕವಾಗಿ ಅಹಿಂಸಾತತ್ವವನ್ನಾಚರಿಸುತ್ತಿರ ಬಹುದು. ಕ್ರಿಸ್ತನು ಕೂಡಾ ತನ್ನ ಪ್ರೇಮ, ಮತ್ತು ವಿಶ್ವಬಾಂಧವ್ಯ ತತ್ವವನ್ನು ಸಾರಿದನು. ಆದರೆ ಈ ಧ್ಯೇಯಗಳು, ಈ ತರದ ಚಿಂತಕರು ಸಮಾಜಕ್ಕೆ, ಅದರ ಹಿತಸಂಬಂಧಗಳಿಗೆ ಹೆಚ್ಚಿನ ತೊಂದರೆಯನ್ನುಂಟು ಮಾಡುವಂತಿಲ್ಲ.

ಇವೆಲ್ಲವನ್ನು ನೋಡುವಾಗ ಧುರೀಣರ ಮುಂದಿ ರುವ ಏಕಮಾತ್ರ ದಾರಿಯೆಂದರೆ ಸಮಾಜದ ಮೂಲ ಭೂತ ಪದ್ಧತಿಗಳಿಗೆ ತಲೆಬಾಗುವುದಾಗಿದೆ. ಒಂದು ವೇಳೆಗೆ ಕೆಲವು ಪದ್ಧತಿಗಳು ಅವರ ದೃಷ್ಟಿಯಲ್ಲಿ ಅಯೋಗ್ಯವಾಗಿದ್ದಲ್ಲಿ, ಹಾನಿಕಾರಕವೆಂದು ಕಂಡುಬಂದ ವುಗಳನ್ನು ಕಿತ್ತೊಗೆಯಲು ಬೇಕಾದ ಆಂದೋಲನ ನಡೆಸುವುದು ಅವರ ಕರ್ತವ್ಯವಾಗಿದೆ. ಇದಕ್ಕೆ ಪ್ರತಿ ಯಾಗಿ ಅವರು ತಮಗೆ ಪ್ರಿಯವಾದ ಪದ್ಧತಿಗಳನ್ನು ಅಂತರಂಗದಲ್ಲಿಯೇ ಅನುಸರಿಸುತ್ತಾ ಬಂದರೆ ಜನತೆಯು ಅವರ ಕುರಿತು ಸಂಶಯವನ್ನು ವ್ಯಕ್ತಪಡಿಸಲು ಎಡೆ ಕೊಟ್ಟಂತಾಗುತ್ತದೆ. ಹೊಸಭಾವಗಳು ಹೊಸಪದ್ಧತಿ ಗಳು ಸಮಾಜದಲ್ಲಿ ಬೇರೂರಬೇಕೆಂದಿದ್ದರೆ ಧುರೀಣರು ಜನಾಭಿಪ್ರಾಯವನ್ನು ಕುದುರಿಸಿ ಅವುಗಳು ಸಮಾಜದಲ್ಲಿ ಬೇರೂರುವಂತೆ ಮಾಡಬೇಕು. “ನಿಮ್ಮ ನಡತೆಯನ್ನು ವಿಶ್ವವೇ ಅನುಕರಿಸುವಂತೆ ನಡೆಯಿರಿ” ಎಂಬ ಜಾಣ್ನುಡಿ ಯನ್ನು ಅವರು ಮರೆಯದಿದ್ದರೆ ಪರಿಣಾಮವು ಉತ್ತಮ ವಾದೀತೆಂದು ಹೇಳಬಹುದು.

# ಪಟಾಕಿ

ಭುಲಾಭಾಯಿ ದೇಸಾಯಿಯವರು ಆರೋಗ್ಯ ಲಾಭಕ್ಕಾಗಿ ಯುರೋಪಿಗೆ ಹೋಗಿ ಬಂದರು; ಪಂಡಿತ ನೆಹರುಗಳು ಅನುಭವ ಲಾಭಕ್ಕಾಗಿ ಹೋದವರು ಅಲ್ಲಿಯೇ ಇದ್ದಾರೆ. ಹೀಗೆ ನಮ್ಮ ಧುರೀಣರು ಒಬ್ಬೊಬ್ಬರೇ ಲಾಭಮಾಡಿಕೊಂಡು ಬರುವಾಗ ಯುರೋಪಿಗಾಗುವ ನಷ್ಟವೆಷ್ಟು?

೦೦ ೦೦ ೦೦

ನಷ್ಟಮಾಡಿ ಕೊಳ್ಳಲು ಯುರೋಪಿಯನ್ನರು ಕಲಿತಿಲ್ಲ. ಹಿಂದುಸ್ಥಾನದಿಂದ ಲಾಭ ಹೊಡೆಯುವ ವಿದ್ಯೆ ಪೂರ್ಣ ಬಲ್ಲವರಿಗೆ ಹಿಂದೀ ಧುರೀಣರಿಂದ ಲಾಭ ಹೊಂದಲು ಗೊತ್ತಿಲ್ಲದೆ ಹೋದೀತೆ?

೦೦ ೦೦ ೦೦

ಖಾಸಗಿಯಾಗಿ ಕೆಲವರು, ಸಾರ್ವಜನಿಕವಾಗಿ ಹಲವರು, ಭುಲಾಭಾಯಿಯವರನ್ನು ನೆಹರುಗಳನ್ನು ಮಾತನಾಡಿಸಿದರು. ಅವರ ಮಾತುಗಳಿಂದ ಲಾಭ ಪಡೆಯಬಹುದಾದಷ್ಟು ಪಡೆದೇ ಬಿಟ್ಟರು!

೦೦ ೦೦ ೦೦

ಮೊನ್ನೆ ಲಂಡನಿನ ಒಂದು ಸಭೆಯಲ್ಲಿ ಪಂಡಿತ ಜವಾಹಿರಲಾಲರು ಸಂಯುಕ್ತ ಘಟನೆಯನ್ನು ಆಮೂಲಾಗ್ರವಾಗಿ, 'ಖಂಡಿಸದೆ ಬಿಡಲಿಕ್ಕಿಲ್ಲ' ಎಂದರು.

೦೦ ೦೦ ೦೦

ಮಿ. ವ್ಹೈಟರೆಂದರೆ ಹಿಂದುಸ್ಥಾನದಲ್ಲಿ ಆಫೀಸರರಾಗಿದ್ದು, ನಿವೃತ್ತಿ ಹೊಂದಿದವರು. ಅವರು ಅದೇ ಸಭೆಯಲ್ಲಿ ಹೇಳಿದರು "ಇತ್ತೀಚಿಗೆ ಬಂದು ಹೋದ ಕಾಂಗ್ರೆಸ್ ಕಾರ್ಯಕಾರೀ ಸಮಿತಿಯ ಪ್ರಮುಖ ಮೆಂಬರ (ಭುಲಾಭಾಯಿ)ರೊಬ್ಬರೊಡನೆ ನಡೆಸಿದ ಮಾತುಕತೆಯಿಂದ ನೀವು 'ಫೆಡರೇಶನನ್ನು ಬಿಡಲಿಕ್ಕಿಲ್ಲ'ವೆಂದು ನಾವು-ನಿವೃತ್ತ ಆಫೀಸರರೆಲ್ಲ ತಿಳಿದುಕೊಂಡೆವು."

೦೦ ೦೦ ೦೦

ಪಂಡಿತರೂ 'ಬಿಡಲಿಕ್ಕಿಲ್ಲ' ಎಂದರು. ದೇಸಾಯಿಯವರೂ 'ಬಿಡಲಿಕ್ಕಿಲ್ಲ' ಎಂದರು. ಧುರೀಣರೊಳಗೆ ಮತಭೇದ—ಅರ್ಥಾತ್, ಮಾತು ಭೇದವೆಲ್ಲಿಯುಂಟು?

೦೦ ೦೦ ೦೦

ಅಲ್ಲಿ ವ್ಹೈಟರು ಮಾತನಾಡಿದ್ದನ್ನು ಕೇಳಿ ಇಲ್ಲಿ ರಾಷ್ಟ್ರಪತಿ ಸುಭಾಸ ಚಂದ್ರರಿಗೆ ಸಿಟ್ಟು ಬಂತು. 'ಸಂಯುಕ್ತ ರಾಜ್ಯ ಘಟನೆಯನ್ನು ಯಾವದೇ ವಿಧದಿಂದ ಅಂಗೀಕರಿಸುವ ನಿರ್ಣಯವಾದರೆ ನನ್ನ ಸ್ಥಾನಕ್ಕೆ ರಾಜಿ ಕೊಟ್ಟು ಆಂದೋಲನ ನಡೆಸದೆ ಬಿಡಲಾರೆ' ಎಂದು ಕಂಠೋಕ್ತ ಹೇಳಿದ್ದಾರೆ.

೦೦ ೦೦ ೦೦

ಬೋಸರಿಗೆ ಆಂದೋಲನ ನಡಿಸಿ ಅದರ ರುಚಿ ಗೊತ್ತುಂಟು; ದೇಸಾಯಿಗಳು ಸ್ಥಾನಮಾನಗಳ ರುಚಿ ಬಲ್ಲರು-ಮಾಡುವದೇನು? 'ಲೋಕೋ ಭಿನ್ನರುಚಿಃ'

---

ಮೊನ್ನೆ ಒಂದೆಡೆಯಲ್ಲಿ ಮುಸ್ಲೀಮ್ ಲೀಗಿನವರು ತನಗೆ ಕಲ್ಲು ಹೊಡೆದಾಗ ಸುಭಾಸ ಚಂದ್ರರು ಇದೆಲ್ಲಾ 'ಅಣುಪ್ರಾಯ'ವಾದುದೆಂಬ ಅರ್ಥ ಬರುವಂತೆ ಮಾತಾಡಿದ್ದರು. ಅದು ಧೀರೋಕ್ತಿ ಮಾತ್ರವಲ್ಲ-ಸತ್ಯ ಮಾತು ಎಂಬುದು ಈಗ ತಿಳಿದು ಬರುತ್ತದೆ.

೦೦ ೦೦ ೦೦

ಶ್ರೀ. ಬೋಸರೀಗ ಕಾಹಿಲೆ ಬಿದ್ದಿದ್ದಾರೆ. 'ಆ ಹೊಡೆತವೂ ಒಂದು ಕಾರಣ'ವೆಂದು ಡಾಕ್ಟರರ ಅಭಿಪ್ರಾಯ.

೦೦ ೦೦ ೦೦

ಈ ಮೊದಲು ಜ್ವರಾಣುಗಳು ಅವರ ಅನಾರೋಗ್ಯಕ್ಕೆ ಕಾರಣವಾಗಿದ್ದವು. ಈ ಬಾರಿ ಈ ಅಣುಗಳು ಅದನ್ನು ತಂದೊಡ್ಡಿದವು!

---

ಮೊನ್ನೆ ಸ್ಪೈನಿನ ಬಳಿ ಬ್ರಿಟಿಷರ ಎರಡು ಸ್ಟೀಮರುಗಳಿಗೆ ಜನರಲ್ ಫ್ರಾಂಕೋನ ಬಾಂಬುಗಳು ಬಿದ್ದವು. ಆಕಾಶದಿಂದ ಬೀಳುವ ವಸ್ತುಗಳವು—ದೈವತಂತ್ರ—ಮನುಷ್ಯರಾದ ನಾವೇನು ಮಾಡಲಿಕ್ಕೆ ಬರುತ್ತದೆ—ಎನ್ನುತ್ತಿದ್ದಾರೆ ಬ್ರಿಟಿಷರು.

೦೦ ೦೦ ೦೦

ಹಾಗೆಂದು ಏನೂ ಮಾಡಲಿಕ್ಕೆ ಬರುವದಿಲ್ಲವೆಂದಲ್ಲ. "ಅಂಥಾ ಸ್ಥಳಗಳಿಗೆ ಹೋಗದೆ ಬಿಟ್ಟು ಬಿಡಲಿಕ್ಕಾಗುತ್ತದೆ ಅದೇ ಉತ್ತಮ" ಎಂದು ವಿದೇಶಾಂಗ ಮಂತ್ರಿಯವರು ಪಾರ್ಲಿಮೆಂಟಿನಲ್ಲಿ ಹೇಳಿದರು.

೦೦ ೦೦ ೦೦

"ಇದು ಹೇಡಿತನ" "ನಮ್ಮ ಇರಸ್ತಿಕೆಗೆ ಹಾನಿ" "ನಮ್ಮದು ನಪುಂಸಕರ ಬಾಳ್ವೆ" ಇತ್ಯಾದಿ ಕೆಲವು ಬಾಂಬುಗಳು ಪಾರ್ಲಿಮೆಂಟಿನಲ್ಲಿಯೂ ಬಂದು ಬಿದ್ದವು ಸರಕಾರದ ಸ್ಥಾನದ ಮೇಲೆ.

೦೦ ೦೦ ೦೦

ಸರಕಾರವು ತನ್ನ ನೀತಿಯಂತೆ ಇಂಥಾ ಸ್ಥಾನವನ್ನೂ ಬಿಟ್ಟುಬಿಡುವದು ವಾಸಿ!

---

ಆಸ್ಟ್ರಿಯವನ್ನು ಜಗಿಯದೆ ನುಂಗಿದ ಹಿಟ್ಲರನ ಕಣ್ಣು ಜೆಕೊಸ್ಲೆವೇಕಿಯದ ಮೇಲೆ ಬಿತ್ತು ಎಂದಾದೊಡನೆ 'ಇನ್ನೇನು ಒಂದರೆಗಳಿಗೆಯ ಆಯುಷ್ಯ ಜೆಕ್ ರಾಜ್ಯಕ್ಕೆ' ಎಂಬ ನಿರೀಕ್ಷೆಯುಂಟಾಯಿತು. ಆದರೆ ಈಗ 'ಎದ್ದಾಯಿತು-ಹಾದಿಕಾಣದು' ಎಂಬಂತಾಗಿದೆ ಹಿಟ್ಲರನಿಗೆ! ಈ ಫಜೀತಿ ಎಲ್ಲಿಂದ ಬಂತು?

 oo oo oo

ಜೆಕ್ ಸಣ್ಣ ರಾಜ್ಯ—ಆದರೆ ಸ್ವಾಭಿಮಾನ ಜಾಸ್ತಿ. ಹಿಟ್ಲರನ ಅಬ್ಬರಕ್ಕೆ 'ಮೇಲೆ ಬಿದ್ದು ನೋಡು. ಒಮ್ಮೆಗೆ' ಜರ್ಮನರಿರುವ ಭಾಗಗಳನ್ನು ಧ್ವಂಸ ಮಾಡಿಯೇ ಸಿದ್ಧ ಎಂದು ಉತ್ತರ ಕೊಟ್ಟಿತು.

oo oo oo

ಒಂದೇ ಕಲೆಯನ್ನಭ್ಯಾಸಿಸಿದವರೊಳಗೆ ಸ್ನೇಹ ಮಾಡುವದು ಜಾಸ್ತಿ. ತನ್ನ ವಿದ್ಯೆ ಜೆಕ್ ಸರಕಾರಕ್ಕೂ ಗೊತ್ತಿದೆಯೆಂದು ತಿಳಿದೊಡನೆ, ಜೆಕೊಸ್ಲೊವೇಕಿಯದ ಮೇಲಿನ ವೈರ ಕಡಿಮೆಯಾದುದು, ಸಮೋದ್ಯೋಗಿಯ ಮೇಲಿನ ಮಾನವ ಸಹಜ ಸ್ನೇಹಭಾವದಿಂದಲ್ಲದೆ ಹೆದರಿಕೆಯಿಂದಲ್ಲ! ಹಿಟ್ಲರನಂತಹ ಲೋಕೈಕ ವೀರನನ್ನು ಹೀಗಲ್ಲದೆ ಮತ್ತೆ ಹೇಗೆ ತಿಳಿಯಲಿ?

oo oo oo

ಜೆಕೋವಿನ ಸುಡೇಟನ್ ಜರ್ಮನರಿಗೆ ಈಗಲಾದರೂ ನಿದ್ರೆ ಬಿದ್ದೀತು. ಹಿಟ್ಲರನು ತಮ್ಮನ್ನು ಕಾಪಾಡುವನೆಂಬ ವಿಶ್ವಾಸದಿಂದಲೇ ಅವರು ಗೊಂದಲವೆಬ್ಬಿಸಿದರು. ಹಾಗೆಯೇ ಮಾಡಿದ-ಸದ್ಯಕ್ಕೆ ಅವರ ಪ್ರಾಣವನ್ನು ರಕ್ಷಿಸಿದ!

---

oo oo oo

'ಚೀನದಲ್ಲಿ ಒಂದು ಇಂಚು ನೆಲ ಉಳಿಯುವ ವರೆಗೆ ಹೋರಾಡಿಯೇ ಸಿದ್ಧ' ಎಂದು ಚಿಯಾಂಗ್ ಕೈಶೇಕರು ಎದೆ ತಟ್ಟುತಿದ್ದಾರೆ. ನೆಲ ಕಡಿಮೆಯಾಗುತ್ತಾ ಬಂದಂತೆ ಯುದ್ಧೋತ್ಸಾಹ ಹೆಚ್ಚುತ್ತಾ ಹೋಗುವದು.

oc oo oo

ಇದಕ್ಕೆ ಒಂದನೇ ದೃಷ್ಟಾಂತ ಚಿಯಾಂಗ್ ಕೈಶೇಕರಾದರೆ ಎರಡನೇ ನಿದರ್ಶನ ಬ್ರಿಟಿಷರು. ಬ್ರಿಟಿಷರಿಗೆ ಬೇಕಾದಷ್ಟು ನೆಲವಿರುವದರಿಂದಲೇ ಎಷ್ಟು ಲತ್ತೆ ಕೊಟ್ಟರೂ ಯುದ್ಧೋತ್ಸಾಹವೇಳುವದಿಲ್ಲ!

**ಪಟಾಕಿವಾಲಾ.**

---